KA / BG-GPO / 2515 / WPP-47 / 2006-2008



# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೪೨ | ಬೆಂಗಳೂರು, ಗುರುವಾರ, ಡಿಸೆಂಬರ್ ೨೦, ೨೦೦೭ (ಮಾರ್ಗಶಿರ ೨೯, ಶಕ ವರ್ಷ ೧೯೨೯) | ಸಂಚಿಕೆ ೫೦ |
|---|---|---|

## ಭಾಗ – ೩

## ಸರ್ಕಾರದ ಮತ್ತು ಖಾಸಗಿ ಜಾಹೀರಾತುಗಳು, ಲೋಕಸೇವಾ ಆಯೋಗದ ಜಾಹೀರಾತುಗಳು, ನೇಮಕಾತಿ ಸಮಿತಿಗಳ ಜಾಹೀರಾತುಗಳು

**ಪಶುಸಂಗೋಪನೆ ಮತ್ತು ಮೀನುಗಾರಿಕೆ ಇಲಾಖೆ**

**ಅಧಿಸೂಚನೆ**

**ಸಂಖ್ಯೆ: ಪಸಂಮೀ 55 ಪಸಸೇ 2007 (ಭಾಗ–2), ಬೆಂಗಳೂರು, ದಿನಾಂಕ: 22ನೇ ಸೆಪ್ಟೆಂಬರ್ 2007**

ಪಶುಪಾಲನಾ ಮತ್ತು ಪಶುವೈದ್ಯ ಸೇವಾ ಇಲಾಖೆಯಲ್ಲಿ ಖಾಲಿ ಇರುವ ಪಶುವೈದ್ಯಾಧಿಕಾರಿ ಹುದ್ದೆಗೆ ಅನುಬಂಧ–1ರಲ್ಲಿ ನಮೂದಿಸಿರುವಂತೆ ಕರ್ನಾಟಕ ಪಶುಪಾಲನಾ ಮತ್ತು ಪಶುವೈದ್ಯ ಸೇವೆಗಳು (ಪಶುವೈದ್ಯಾಧಿಕಾರಿಗಳ ನೇಮಕಾತಿ) (ವಿಶೇಷ ನೇಮಕಾತಿ) ನಿಯಮಗಳು–2003ರಡಿಯಲ್ಲಿ **"ಹೆಚ್ಚುವರಿ ಆಯ್ಕೆ ಪಟ್ಟಿಯಲ್ಲಿ ಆಯ್ಕೆ ಸಮಿತಿಯಿಂದ ನೇಮಕಗೊಂಡಿರುವ 16 ಪಶುವೈದ್ಯಾಧಿಕಾರಿಗಳಿಗೆ"** ಅವರುಗಳ ಹೆಸರಿನ ಮುಂದೆ ಕಾಣಿಸಿರುವ ಸ್ಥಳಕ್ಕೆ ಪರಿಷ್ಕೃತ ವೇತನ ಶ್ರೇಣಿ ರೂ.12000–300–12300–350–14400–400–16800–450–19500–525–22650ರಲ್ಲಿ ಎರಡು ವರ್ಷಗಳ ಖಾಯಂ ಪೂರ್ವ ಸೇವಾವಧಿಗೆ ಒಳಪಟ್ಟು ಈ ಕೆಳಕಂಡ ಷರತ್ತು ಮತ್ತು ನಿಬಂಧನೆಗಳಿಗೆ ಅನುಸಾರವಾಗಿ ನೇಮಕಾತಿ ಮಾಡಲಾಗಿದೆ.

**ಷರತ್ತು ಮತ್ತು ನಿಬಂಧನೆಗಳು**

(1) ಅಭ್ಯರ್ಥಿಗಳ ನೇಮಕಾತಿಯು ತಾತ್ಕಾಲಿಕವಾಗಿದ್ದು, ಅವರ ನೇಮಕಾತಿ ಹಾಗೂ ಸೇವಾ ಷರತ್ತುಗಳು ಆಗ್ಗಿಂದಾಗ್ಗೆ ಜಾರಿಯಲ್ಲಿರುವ ಸರ್ಕಾರಿ ಆದೇಶಗಳು/ ಹೊರಡಿಸಲ್ಪಡುವ ನಿಯಮಾವಳಿಗಳ ಅಧೀನಕ್ಕೆ ಒಳಪಟ್ಟಿರುತ್ತದೆ.

(2) ನೇಮಕಾತಿ ಹೊಂದಿದ ಅಭ್ಯರ್ಥಿಗಳು ಕರ್ನಾಟಕ ನಾಗರೀಕ ಸೇವಾ (ಪರೀಕ್ಷಾರ್ಥ) ನಿಯಮಾವಳಿ ನಿಯಮ 1977ರಲ್ಲಿನ ನಿಯಮಗಳಿಗೆ ಬದ್ಧರಾಗಿರುತ್ತಾರೆ.

(3) ಮೀಸಲಾತಿ ಅಡಿಯಲ್ಲಿ ಆಯ್ಕೆಗೊಂಡು ನೇಮಕಾತಿ ಹೊಂದಿರುವ ಅಭ್ಯರ್ಥಿಗಳ ನೇಮಕಾತಿಯು ಸಂಬಂಧಪಟ್ಟ ಜಿಲ್ಲಾ/ತಾಲ್ಲೂಕು ಸಮಾಜ ಕಲ್ಯಾಣಾಧಿಕಾರಿಗಳು/ ತಹಶೀಲ್ದಾರ್ ಕಛೇರಿಯಿಂದ ನೀಡುವಂತಹ ಜಾತಿ/ಸಿಂಧುತ್ವ ಪ್ರಮಾಣ ಪತ್ರದ ಆಧಾರದ ಮೇಲೆ ಖಚಿತತೆಗೆ ಒಳಪಟ್ಟಿರುತ್ತದೆ. ಒಂದು ವೇಳೆ ಮೀಸಲಾತಿ ಪಡೆದಿರುವುದು ಅಕ್ರಮವೆಂದು ಸಾಬೀತಾದರೆ ಅಂತಹ ಅಭ್ಯರ್ಥಿಯ ನೇಮಕಾತಿಯು ತಕ್ಷಣವೇ ರದ್ದುಗೊಳ್ಳುತ್ತದೆ ಹಾಗೂ ಅವರ ಮೇಲೆ ನಿಯಮಾವಳಿಗಳ ಪ್ರಕಾರ ಕಠಿಣ ಕಾನೂನು ಕ್ರಮ ಕೈಗೊಳ್ಳಲಾಗುತ್ತದೆ.

(4) ನೇಮಕಾತಿಗೊಂಡ ಅಭ್ಯರ್ಥಿಗಳು ಪರೀಕ್ಷಾರ್ಥ ಅವಧಿಯಲ್ಲಿ (Probationary Period) ಕರ್ನಾಟಕ ನಾಗರೀಕ ಸೇವಾ (ಸೇವಾ ಮತ್ತು ಕನ್ನಡ ಭಾಷಾ ಪರೀಕ್ಷೆ) ನಿಯಮಾವಳಿ 1974 ರನ್ವಯ ಪಶುವೈದ್ಯಾಧಿಕಾರಿ ಹುದ್ದೆಗೆ ನಿಗದಿಪಡಿಸಿರುವ ಇಲಾಖಾ ಪರೀಕ್ಷೆಗಳು ಹಾಗೂ ಕನ್ನಡ ಭಾಷಾ ಪರೀಕ್ಷೆಯಲ್ಲಿ ಉತ್ತೀರ್ಣರಾಗತಕ್ಕದ್ದು.

(5) ಅಭ್ಯರ್ಥಿಗಳ ಜೇಷ್ಠತೆಯು ಕರ್ನಾಟಕ ನಾಗರೀಕ ಸೇವಾ (ಸೇವಾ ಹಿರಿತನ) ನಿಯಮಗಳು 1957ರಲ್ಲಿನ ನಿಯಮ–5ರನ್ವಯ ಹಾಗೂ ಕಾಲಕಾಲಕ್ಕೆ ಸರ್ಕಾರದಿಂದ ಹೊರಡಿಸುವ ಆದೇಶಗಳಿಗೆ ಒಳಪಟ್ಟಿರುತ್ತದೆ.

(6) ಸರ್ಕಾರದ ಅಧಿಕೃತ ಜ್ಞಾಪನಾ ಸಂಖ್ಯೆ: ಎಫ್‌ಡಿ 9 ಎಸ್‌ಆರ್‌ಎಸ್ 93, ದಿನಾಂಕ: 18–11–1993ರಲ್ಲಿರುವಂತೆ ನೇಮಕಾತಿ ಮಾಡಿದ ನಂತರ ನೇಮಕಾತಿ ಹೊಂದಿದ ಅಭ್ಯರ್ಥಿಗಳು ತಮ್ಮ ಪರೀಕ್ಷಾರ್ಥ ಅವಧಿಯಲ್ಲಿ ಉನ್ನತ ವ್ಯಾಸಂಗಕ್ಕೆ ತೆರಳಲು/ ಮುಂದುರಿಸಲು ಅವಕಾಶವಿರುವುದಿಲ್ಲ.

(7) ಅಭ್ಯರ್ಥಿಗಳು ನೇಮಕಾತಿ ಹೊಂದಿದ 15 ದಿವಸಗಳೊಳಗಾಗಿ ಸಂಬಂಧಪಟ್ಟ ಜಿಲ್ಲಾಧಿಕಾರಿಗಳಿಂದ ಸಿಂಧುತ್ವ ಪ್ರಮಾಣ ಪತ್ರ, ಸಂಬಂಧಪಟ್ಟ ಜಿಲ್ಲಾ ಪೊಲೀಸ್ ಅಧೀಕ್ಷಕರಿಂದ ಪೊಲೀಸ್ ಪೂರ್ವ ಪರಿಶೀಲನಾ ವರದಿ ಹಾಗೂ ದೃಢೀಕೃತ ಸರ್ಕಾರಿ ವೈದ್ಯಾಧಿಕಾರಿಯಿಂದ (Licenced Medical Officer) ವೈದ್ಯಕೀಯ ಪ್ರಮಾಣ ಪತ್ರವನ್ನು ಪಡೆದು ಸರ್ಕಾರಕ್ಕೆ ಸಲ್ಲಿಸುವುದು. ಒಂದು ವೇಳೆ ಸಲ್ಲಿಸದಿದ್ದಲ್ಲಿ ನೇಮಕಾತಿ ಆದೇಶವನ್ನು ಯಾವುದೇ ಮುನ್ಸೂಚನೆ ನೀಡದೇ ರದ್ದುಗೊಳಿಸಲಾಗುವುದು ಹಾಗೂ ಸದರಿ ಪ್ರಮಾಣ ಪತ್ರಗಳಲ್ಲಿ ಪ್ರತಿಕೂಲ ಷರಾ ಏನಾದರೂ ಇದ್ದಲ್ಲಿ ನೇಮಕಾತಿ ಆದೇಶ ತಂತಾನೇ ರದ್ದಾಗುತ್ತದೆ.

(8) ಅಭ್ಯರ್ಥಿಗಳು ನೇಮಕಾತಿ ಹೊಂದಿದ ಸ್ಥಳದಲ್ಲಿ ಕರ್ತವ್ಯಕ್ಕೆ ಹಾಜರಾಗುವ ಸಮಯದಲ್ಲಿ ಮೂಲ ಅಂಕಪಟ್ಟಿ, ಪದವಿ ಪ್ರಮಾಣ ಪತ್ರ, ಜನ್ಮ ದಿನಾಂಕ ದೃಢೀಕರಣ ಪತ್ರ / ಎಸ್.ಎಸ್.ಎಲ್.ಸಿ. ಅಂಕಪಟ್ಟಿ, ಮೀಸಲಾತಿ ಪ್ರಮಾಣ ಪತ್ರ ಹಾಗೂ ಇತರೆ ಮೂಲ ಪ್ರಮಾಣ ಪತ್ರಗಳನ್ನು ಪರಿಶೀಲನೆಗೆ ಹಾಜರುಪಡಿಸತಕ್ಕದ್ದು ಮತ್ತು ಇಬ್ಬರು ಗೌರವಾನ್ವಿತ ವ್ಯಕ್ತಿಗಳಿಂದ ಗುಣ–ನಡತೆ ಪ್ರಮಾಣ ಪತ್ರಗಳನ್ನು ಇತ್ತೀಚಿನ ಭಾವಚಿತ್ರಗಳೊಂದಿಗೆ ಒದಗಿಸತಕ್ಕದ್ದು.

(9) ಅಭ್ಯರ್ಥಿಗಳು ನೇಮಕಾತಿ ಆದೇಶವನ್ನು ಸ್ವೀಕರಿಸಿದ 15 ದಿನಗಳ ಒಳಗಾಗಿ ನೇಮಕಾತಿ ಹೊಂದಿದ ಸ್ಥಳದಲ್ಲಿನ ಸಂಬಂಧಪಟ್ಟ ಪಶುಪಾಲನಾ ಮತ್ತು ಪಶುವೈದ್ಯ ಸೇವಾ ಇಲಾಖೆಯ ಉಪನಿರ್ದೇಶಕರ ಸಮಕ್ಷಮದಲ್ಲಿ ಕರ್ತವ್ಯಕ್ಕೆ ವರದಿ ಮಾಡಿಕೊಂಡು ಹಾಜರಾಗತಕ್ಕದ್ದು. 15 ದಿನಗಳ ಒಳಗಾಗಿ ಹಾಜರಾಗದಿದ್ದಲ್ಲಿ ನೇಮಕಾತಿ ಆದೇಶವು ಕರ್ನಾಟಕ ನಾಗರೀಕ ಸೇವಾ (ಸಾಮಾನ್ಯ ನೇಮಕಾತಿ) ನಿಯಮಗಳು 1977ರ ನಿಯಮ 18(3) ರನ್ವಯ ಯಾವುದೇ ಮುನ್ಸೂಚನೆ ಇಲ್ಲದೇ ತಂತಾನೇ ರದ್ದಾಗುತ್ತದೆ.

(10) ಅಭ್ಯರ್ಥಿಗಳು ಸಂಬಂಧಪಟ್ಟ ಪಶುಪಾಲನಾ ಮತ್ತು ಪಶುಪಾಲನಾ ಮತ್ತು ಪಶುವೈದ್ಯ ಸೇವಾ ಇಲಾಖೆಯ ಉಪನಿರ್ದೇಶಕರ ಸಮ್ಮುಖದಲ್ಲಿ ಕರ್ತವ್ಯಕ್ಕೆ ಹಾಜರಾಗುವ ಸಮಯದಲ್ಲಿ ರೂ.10–00 ಮೌಲ್ಯದ ಛಾಪಾ ಕಾಗದದಲ್ಲಿ (Document Sheet) ಅನುಬಂಧ–2ರಲ್ಲಿ ಲಗತ್ತಿಸಿರುವಂತೆ ವಚನಬದ್ಧ ಪ್ರಮಾಣ ಪತ್ರವನ್ನು ಬರೆದುಕೊಡತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಹಾಗೂ ಅವರ ಹೆಸರಿನಲ್ಲಿ,
**ಎಂ.ಪಿ. ನಾಗರಾಜ**
ಪೀಠಾಧಿಕಾರಿ–2,
ಪಶುಸಂಗೋಪನೆ ಮತ್ತು ಮೀನುಗಾರಿಕೆ ಇಲಾಖೆ,
(ಪಶುಸಂಗೋಪನೆ–ಎ).

**ಸರ್ಕಾರಿ ಅಧಿಸೂಚನೆ ಸಂಖ್ಯೆ: ಪಸಂಮೀ 55 ಪಸಸೇ 2007 (ಭಾಗ–2),**
**ದಿನಾಂಕ: 22–09–2007ಕ್ಕೆ ಅನುಬಂಧ – 1**

| ಕ್ರಮ ಸಂಖ್ಯೆ | ಅಭ್ಯರ್ಥಿಯ ಹೆಸರು | ಅಭ್ಯರ್ಥಿಯ ಅಂಚೆ ವಿಳಾಸ | ನೇಮಕಾತಿ ನೀಡಿ ನಿಯುಕ್ತಿಗೊಳಿಸಲಾದ ಸ್ಥಳ |
|---|---|---|---|
| Sl. No. | Name of the Candidate | Postal Address of the Candidate | Place |
| 1) | Krishnegowda C.J. | S/o. Javaregowda, Chattenahally, Byrapura Post, K.R. Pet Taluk, Mandya - 571426 | ಪಶುಚಿಕಿತ್ಸಾಲಯ, ಹುಲಿವಾನ, ಮಂಡ್ಯ ತಾಲ್ಲೂಕು, ಮಂಡ್ಯ ಜಿಲ್ಲೆ. |
| 2) | Nagesh H | S/o.B.C.Hanumanthaiah, Bellara post, Chikkanayakanahally Taluk, Tumkur dist.572 218 | ಪಶುಚಿಕಿತ್ಸಾಲಯ, ಬರಗೂರು, ಶಿರಾ ತಾಲ್ಲೂಕು, ತುಮಕೂರು ಜಿಲ್ಲೆ. |
| 3) | Madhu B.P. | S/o. Puttaswamy B.R. No.1397, Bhudeswara Nilaya, Shankaripuram Hassan 573201 | ಪಶುಚಿಕಿತ್ಸಾಲಯ, ರಾಯರಕೊಪ್ಪಲು, ಹಾಸನ ತಾಲ್ಲೂಕು, ಹಾಸನ ಜಿಲ್ಲೆ. |
| 4) | Bhanuprakash | S/o. Siddaiah S, C/o. Malleshappa I.C., Door No. 1004/2, Siddarameshwara Nilaya, Behind Power Station, 5th Cross, Govinapura, Tiptur, Tumkur dist. 572 202 | ಪಶುಚಿಕಿತ್ಸಾಲಯ, ಮಂಗಲ, ಮಂಡ್ಯ ತಾಲ್ಲೂಕು, ಮಂಡ್ಯ ಜಿಲ್ಲೆ. |

| ಕ್ರಮ ಸಂಖ್ಯೆ | ಅಭ್ಯರ್ಥಿಯ ಹೆಸರು | ಅಭ್ಯರ್ಥಿಯ ಅಂಚೆ ವಿಳಾಸ | ನೇಮಕಾತಿ ನೀಡಿ ನಿಯುಕ್ತಿಗೊಳಿಸಲಾದ ಸ್ಥಳ |
|---|---|---|---|
| Sl. No. | Name of the Candidate | Postal Address of the Candidate | Place |
| 5) | Ventakesh Sannabidari | C/o. S.K. Tirlapur, Kelageri Oni, Hulkoti post, Gadag Taluk & Dist.582 205 | ಪಶುಚಿಕಿತ್ಸಾಲಯ, ಚಿಕ್ಕನರಗುಂದ, ನರಗುಂದ ತಾಲ್ಲೂಕು, ಗದಗ್ ಜಿಲ್ಲೆ. |
| 6) | Keshava G.V. | S/o. Venkata Reddy, Gattahalli village, Holur post, Kolar Taluk & dist.563 126 | ಪಶುಚಿಕಿತ್ಸಾಲಯ, ಕುಡಿಯನೂರು, ಮಾಲೂರು ತಾಲ್ಲೂಕು, ಕೋಲಾರ ಜಿಲ್ಲೆ. |
| 7) | Shivaputra Badami | S/o. Veerappa Badami, Neelagund post, Badami Taluk, Bagalkote dist. | ಪಶುಚಿಕಿತ್ಸಾಲಯ, ಅಚನೂರು, ಬಾಗಲಕೋಟೆ ತಾಲ್ಲೂಕು ಬಾಗಲಕೋಟೆ ಜಿಲ್ಲೆ. |
| 8) | Sridhar R.N. | S/o. Narayana Swamy R Perumachanahalli, Chinnasandra post, Chintamani Taluk, Kolar dist. 563 125 | ಪಶುಚಿಕಿತ್ಸಾಲಯ, ಹೆಬ್ಬೂರು, ತುಮಕೂರು ತಾಲ್ಲೂಕು, ತುಮಕೂರು ಜಿಲ್ಲೆ. |
| 9) | Darshan Raj G | S/o. Gangaraj D, No.246, Shilpa Darshan, Gangasandra Road, Maralur, Tumkur 572105 | ಪಶುಚಿಕಿತ್ಸಾಲಯ, ಮಾರ್ಗಾನುಕುಂಟೆ, ಬಾಗೇಪಲ್ಲಿ ತಾಲ್ಲೂಕು, ಚಿಕ್ಕಬಳ್ಳಾಪುರ ಜಿಲ್ಲೆ. |
| 10) | Basavarajendra Biradar | S/o. Shidramappa Gouda Bidarag Gabsavalgi post, Sindgi Taluk, Bijapur dist. 586123 | ಪಶುಚಿಕಿತ್ಸಾಲಯ, ಮೊರಟಗಿ, ಸಿಂಧಗಿ ತಾಲ್ಲೂಕು, ಬಿಜಾಪುರಜಿಲ್ಲೆ. |
| 11) | Sunilkumar K.M. | S/o. Manjappa P., Siddeshwara Krupa, 2nd Cross, Shanthinagar, Shikaripura, Shimoga 577 427 | ಪಶುಚಿಕಿತ್ಸಾಲಯ, ಬೇಗೂರು, ಶಿಕಾರಿಪುರ ತಾಲ್ಲೂಕು, ಶಿವಮೊಗ್ಗ ಜಿಲ್ಲೆ. |
| 12) | Shivashanker | S/o. Pandit Rao, Wallapure, Belkuni, Aurad Taluk, Bidar dist. 585 436 | ಪಶುಚಿಕಿತ್ಸಾಲಯ, ರಂಜೋಳ ಖೇಣಿ, ಬೀದರ್ ತಾಲ್ಲೂಕು ಬೀದರ್ ಜಿಲ್ಲೆ. |
| 13) | Sachin Soundalagi | S/o. Nanasaheb Soundalagi, Chinchali post, Raibagh Taluk, Belgaum 591 217 | ಪಶುಚಿಕಿತ್ಸಾಲಯ, ಮಾಂಜರಿ, ಚಿಕ್ಕೋಡಿ ತಾಲ್ಲೂಕು ಬೆಳಗಾವಿ ಜಿಲ್ಲೆ. |
| 14) | Anitha M M | D/o. Muthappa M.K., No.68/1, Chikkatturu village, Kudu Mangalore post, Kushalnagar North Coorg - 571 234 | ಹಂದಿ ಸಂವರ್ಧನಾ ಕೇಂದ್ರ, ಕೂಡಿಗೆ, ಮಡಿಕೇರಿ ತಾಲ್ಲೂಕು, ಕೊಡಗು ಜಿಲ್ಲೆ. |
| 15) | Shamala B.R. | D/o. Rudraiah B.M. W/o Gururaj M T 3-6 BEL Colony, Jalahalli post, Bangalore - 56013 | ಪಶುಚಿಕಿತ್ಸಾಲಯ, ಹಂಡಂಚಿ, ಬೆಳ್ತಂಗಡಿ ತಾಲ್ಲೂಕು ದಕ್ಷಿಣ ಕನ್ನಡಜಿಲ್ಲೆ. |
| 16) | P.C. Mini | W/o. Arun Pavithran, No.37, Sri. Karthika, 2nd Cross, Krishna nagar, Shetty halli, Jalahalli West, Bangalore 560 015 | ಪಶುಚಿಕಿತ್ಸಾಲಯ, ಹಲಗೂರು, ಕನಕಪುರ ತಾಲ್ಲೂಕು, ರಾಮನಗರ ಜಿಲ್ಲೆ |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಹಾಗೂ ಅವರ ಹೆಸರಿನಲ್ಲಿ,

**ಎಂ.ಪಿ.ನಾಗರಾಜ**

ಪೀಠಾಧಿಕಾರಿ–2,

ಪಶುಸಂಗೋಪನೆ ಮತ್ತು ಮೀನುಗಾರಿಕೆ ಇಲಾಖೆ,

(ಪಶುಸಂಗೋಪನೆ–ಎ).

ಅನುಬಂಧ–2

ವಚನಬದ್ಧ ಪ್ರಮಾಣ ಪತ್ರ

ಶ್ರೀಮತಿ / ಶ್ರೀ ______________________________

ಇವರ ಪುತ್ರ / ಪುತ್ರಿಯಾದ ಡಾ:______________________________

(ವಿಳಾಸದೊಂದಿಗೆ) ______________________________

______________________________

ನಾನು ಈ ಮೂಲಕ ಭಾರತದ ಸಂವಿಧಾನಕ್ಕೆ ಬದ್ಧನಾಗಿರುವುದಾಗಿ ಹಾಗೂ ಸರ್ಕಾರಿ ಸೇವೆಯನ್ನು ನಿಷ್ಠೆಯಿಂದ ಹಾಗೂ ಸೇವಾ ಮನೋಭಾವದಿಂದ ಮಾಡುವುದಾಗಿ ಪ್ರಮಾಣೀಕರಿಸುತ್ತೇನೆ. ಒಂದು ವೇಳೆ ಮೀಸಲಾತಿ ಪಡೆದಿರುವಲ್ಲಿ ಅಕ್ರಮವೆಂದು ಕಂಡುಬಂದಲ್ಲಿ ನಾನು ನನ್ನ ನೇಮಕಾತಿ ಆದೇಶವನ್ನು ಕಳೆದುಕೊಳ್ಳುವೆನು ಎಂಬುದನ್ನು ಮನಗಂಡು ಪ್ರಮಾಣೀಕರಿಸುತ್ತೇನೆ. ಇದರಲ್ಲಿ ಯಾವುದೇ ಲೋಪಗಳು ಕಂಡುಬಂದಲ್ಲಿ ಮುನ್ಸೂಚನೆಯಿಲ್ಲದೇ ಸೇವೆಯಿಂದ ತೆಗೆದುಹಾಕಲು ಯಾವುದೇ ಅಭ್ಯಂತರವಿಲ್ಲವೆಂದು ಈ ಮೂಲಕ ಪ್ರಮಾಣೀಕರಿಸುತ್ತೇನೆ.

ಸ್ಥಳ : (ಅಭ್ಯರ್ಥಿಯ ಹೆಸರು ಮತ್ತು ಸಹಿ)

ದಿನಾಂಕ :

**ಸಾಕ್ಷಿಗಳು:–**

(1)

(2)

ಅಭ್ಯರ್ಥಿಯು ನನ್ನ ಸಮ್ಮುಖದಲ್ಲಿ ಪ್ರಮಾಣ ಮಾಡಿದ್ದಾರೆ ಮತ್ತು ರುಜುವನ್ನು ನಾನು ಗುರುತಿಸಿರುತ್ತೇನೆ.

ಸ್ಥಳ :

ದಿನಾಂಕ :

ಉಪನಿರ್ದೇಶಕರು,
ಪಶುಪಾಲನಾ ಮತ್ತು ಪಶುವೈದ್ಯ ಸೇವಾ ಇಲಾಖೆ,
______________________ ಜಿಲ್ಲೆ,
(ಹೆಸರು ಮತ್ತು ಮೊಹರು)

ಪಿ.ಆರ್. 621

**ಕಾರ್ಯಪಾಲಕ ಅಭಿಯಂತರರ ಕಛೇರಿ, ಲೋಕೋಪಯೋಗಿ ಇಲಾಖೆ, ಉಡುಪಿ ವಿಭಾಗ, ಉಡುಪಿ**

**ಟೆಂಡರು ಪ್ರಕಟಣೆ**

**ನಂ./ಜಿ.ಎನ್.ಎಲ್./ಎನ್.ಐ.ಟಿ./ಯು.ಡಿ.ಎನ್./2007-2008/೫೯ ದಿನಾಂಕ: 15ನೇ ನವೆಂಬರ್ 2007**

ಈ ಕೆಳಗಿನ ಕೆಲಸಕ್ಕಾಗಿ ಪ್ರತ್ಯೇಕ ಮೊಹರಾದ ಟೆಂಡರನ್ನು ಕರ್ನಾಟಕ ಲೋಕೋಪಯೋಗಿ ಇಲಾಖೆಯಲ್ಲಿ ನೊಂದಾಯಿಸಲಾದ ಅರ್ಹ ದರ್ಜೆಯ ಗುತ್ತಿಗೆದಾರರಿಂದ ಕೆಲಸದ ಹೆಸರನ್ನು ಮೊಹರಾದ ಲಕೋಟೆಯ ಮೇಲೆ ನಮೂದಿಸಿ ನಿಯಮಿತ ಫಾರಂಗಳಲ್ಲಿ ದ್ವಿಪ್ರತಿಯಲ್ಲಿ ಆಹ್ವಾನಿಸಲಾಗಿದೆ. ಕಾರ್ಯಪಾಲಕ ಇಂಜಿನಿಯರು, ಲೋಕೋಪಯೋಗಿ ಇಲಾಖೆ, ಉಡುಪಿ ವಿಭಾಗ, ಉಡುಪಿ ಇವರು ದಿನಾಂಕ: 21.12.2007ರ ಅಪರಾಹ್ನ 4.00 ಗಂಟೆಯವರೆಗೆ ಟೆಂಡರನ್ನು ಸ್ವೀಕರಿಸುವರು. ಸಾಧ್ಯವಾದಲ್ಲಿ ಅದೇ ದಿನ ತೆರೆಯಲಾಗುವುದು.

ಖಾಲಿ ಟೆಂಡರು ಫಾರಂಗಳಿಗೆ ಅರ್ಜಿಗಳನ್ನು ನಿಗಧಿಪಡಿಸಿದ ಬೆಲೆಯೊಂದಿಗೆ (ಇದನ್ನು ಹಿಂದಿರುಗಿಸಲಾಗುವುದಿಲ್ಲ) ದಿನಾಂಕ: 20.12.2007 ರವರೆಗೆ ಕೆಲಸದ ಎಲ್ಲಾ ದಿನಗಳಂದು ಕಛೇರಿ ವೇಳೆಯಲ್ಲಿ ಸ್ವೀಕರಿಸಲಾಗುವುದು. ಅರ್ಜಿ ಜೊತೆಗೆ ಗುತ್ತಿಗೆದಾರರು ಅವರ ರಿಜಿಸ್ಟ್ರೇಷನ್ ಸರ್ಟಿಫೈಡ್ ಪ್ರತಿಯನ್ನು ಸಲ್ಲಿಸತಕ್ಕದ್ದು. ಖಾಲಿ ಟೆಂಡರು ಫಾರಂಗಳನ್ನು ಈ ಕಛೇರಿಯಲ್ಲಿ ದಿನಾಂಕ: 20.12.2007 ರವರೆಗೆ ನೀಡಲಾಗುವುದು.

| ಕ್ರ. ಸಂ. | ಕಾಮಗಾರಿಯ ಹೆಸರು | ಟೆಂಡರಿಗಿರಿಸಿದ ಅಂದಾಜು ಮೊಬಲಗು (ರೂ. ಗಳಲ್ಲಿ) | ಇಎಂಡಿ (ರೂ. ಗಳಲ್ಲಿ) | ಕಾಮಗಾರಿ ಮುಗಿಸಲು ನಿಗದಿಪಡಿಸಿದ ಕಾಲಮಿತಿ (ಮಳೆಗಾಲ ಹೊರತು) | ಟೆಂಡರ್ ನಮೂನೆ | ಟೆಂಡರ್ (ಶೆಡ್ಯೂಲ್ ಬೆಲೆ) | ಅರ್ಹ ಗುತ್ತಿಗೆದಾರರು |
|---|---|---|---|---|---|---|---|
| | **ಲೆಕ್ಕ ಶೀರ್ಷಿಕೆ: 4216 - 04 - ಅಗ್ನಿ ಶಾಮಕ ಮತ್ತು ನಿಯಂತ್ರಣ:** | | | | | | |
| 1. | ಕಾರ್ಕಳದಲ್ಲಿ ಅಗ್ನಿಶಾಮಕ ಅಧಿಕಾರಿಯವರಿಗೆ ವಸತಿಗೃಹ ನಿರ್ಮಾಣ | 11,21,000.00 | 16900.00 | 6 ತಿಂಗಳು | ದರವಾರು | 1,250/- | IIನೇ ದರ್ಜೆ ಮತ್ತು ಮೇಲ್ಪಟ್ಟು |
| 2. | ಕಾರ್ಕಳದಲ್ಲಿ ಅಗ್ನಿಶಾಮಕ ಚಾಲಕರಿಗೆ ವಸತಿಗೃಹ ನಿರ್ಮಾಣ | 39,22,000.00 | 39300.00 | 9 ತಿಂಗಳು | ದರವಾರು | 4,500/- | Iನೇ ದರ್ಜೆ |
| | **ಲೆಕ್ಕ ಶೀರ್ಷಿಕೆ: 4216 - ವಸತಿ ನಿಲಯ ಕಟ್ಟಡಗಳು:** | | | | | | |
| 3. | ಉಡುಪಿಯಲ್ಲಿ ಲೋಕೋಪಯೋಗಿ ಇಲಾಖೆ, ಸಹಾಯಕ ಕಾರ್ಯನಿರ್ವಾಹಕ ಇಂಜಿನಿಯರವರ ವಸತಿಗೃಹ ನಿರ್ಮಾಣ | 24,87,000.00 | 25000.00 | 6 ತಿಂಗಳು | ದರವಾರು | 2,800/- | IIನೇ ದರ್ಜೆ ಮತ್ತು ಮೇಲ್ಪಟ್ಟು |

| ಕ್ರ. ಸಂ. | ಕಾಮಗಾರಿಯ ಹೆಸರು | ಟೆಂಡರಿಗಿರಿಸಿದ ಅಂದಾಜು ಮೊಬಲಗು (ರೂ. ಗಳಲ್ಲಿ) | ಇಎಂಡಿ (ರೂ. ಗಳಲ್ಲಿ) | ಕಾಮಗಾರಿ ಮುಗಿಸಲು ನಿಗದಿಪಡಿಸಿದ ಕಾಲಮಿತಿ (ಮಳೆಗಾಲ ಹೊರತು) | ಟೆಂಡರ್ ನಮೂನೆ | ಟೆಂಡರ್ (ಶೆಡ್ಯೂಲ್ ಬೆಲೆ) | ಅರ್ಹ ಗುತ್ತಿಗೆದಾರರು |
|---|---|---|---|---|---|---|---|
| 4. | ಉಡುಪಿಯಲ್ಲಿ ಕಾರ್ಯನಿರ್ವಾಹಕ ಇಂಜಿನಿಯರ್, ಲೋಕೋಪಯೋಗಿ ಇಲಾಖೆ, ಇವರ ವಸತಿಗೃಹ ನಿರ್ಮಾಣ. | 30,51,400.00 | 31000.00 | 6 ತಿಂಗಳು | ದರವಾರು | 3,375/- | Iನೇ ದರ್ಜೆ |

**ಸೂಚನೆಗಳು:**

1) ಯಾವುದೇ ಟೆಂಡರನ್ನು ಅಥವಾ ಎಲ್ಲಾ ಟೆಂಡರನ್ನು ಯಾವುದೇ ಕಾರಣ ನೀಡದೆ ತಿರಸ್ಕರಿಸುವ ಅಥವಾ ಅಂಗೀಕರಿಸುವ ಹಕ್ಕನ್ನು ಸಂಬಂಧಪಟ್ಟ ಇಲಾಖಾ ಅಧಿಕಾರಿಯವರು ಹೊಂದಿರುತ್ತಾರೆ.
2) ಗುತ್ತಿಗೆದಾರರು ಸಿಮೆಂಟ್, ಉಕ್ಕು ಹಾಗೂ ಕಾಮಗಾರಿಗಳಿಗೆ ಬೇಕಾದ ಎಲ್ಲಾ ಸಾಮಗ್ರಿಗಳ ಸಂಗ್ರಹಕ್ಕೆ ತಮ್ಮ ಸ್ವಂತ ವ್ಯವಸ್ಥೆ ಮಾಡಿಕೊಳ್ಳಬೇಕು. ಇದನ್ನು ಕೆಲಸಕ್ಕೆ ಉಪಯೋಗಿಸುವ ಮೊದಲು ಗುಣನಿಯಂತ್ರಣ ಪರೀಕ್ಷೆಗೆ ಒಳಪಡಿಸಿ, ಫಲಿತಾಂಶವು ಐ.ಎಸ್.ಎಸ್. (I.S.S.) ಗುಣ ಮಟ್ಟಕ್ಕೆ ಸರಿಹೊಂದುವಂತಿರಬೇಕು. ಈ ಅಂಶವನ್ನು ಗುತ್ತಿಗೆದಾರರು ಟೆಂಡರು ಸಲ್ಲಿಸುವಾಗ ಗಮನಿಸಬೇಕು.
3) ಇಎಂಡಿಯನ್ನು ರಾಷ್ಟ್ರೀಕೃತ ಯಾ ಶೆಡ್ಯೂಲ್ಡ್ ಬ್ಯಾಂಕಿನಿಂದ ಪಡೆದ ಎಫ್.ಡಿ.ಆರ್./ ಕಾಲ್‌ಡಿಪೋಸಿಟ್, ಡಿಡಿ, ಬ್ಯಾಂಕಗ್ಯಾರಂಟಿ ಅಥವಾ ಎನ್.ಎಸ್.ಸಿ. ರೂಪದಲ್ಲಿ (ಎನ್.ಎಸ್.ಸಿಯನ್ನು ಕೆಳಸಹಿದಾರರ ಹೆಸರಿಗೆ ಪ್ಲಜ್ ಮಾಡಿ) ಸಲ್ಲಿಸಬೇಕು.
4) ಕಾಮಗಾರಿಗಳನ್ನು ಕೈಗೆತ್ತಿಕೊಳ್ಳುವ ಗುತ್ತಿಗೆದಾರರಿಂದ ಕಾಮಗಾರಿಯ ಬಿಲ್ಲಿನಲ್ಲಿ ನಿಯಮಾನುಸಾರ ಇರುವ ಎಲ್ಲಾ ವ್ಯವಕಲನಗಳ ಜೊತೆಗೆ 1% ರಷ್ಟು (ಶೇಕಡಾ ಒಂದರಷ್ಟು) "ಕಾರ್ಮಿಕ ಕಲ್ಯಾಣ ಸುಂಕ" ವನ್ನು ಕಡಿತಗೊಳಿಸಲಾಗುವುದು ಎಂಬುದನ್ನು ಟೆಂಡರು ಸಲ್ಲಿಸುವ ಮೊದಲು ತಿಳಿಯುವುದು.
5) ಟೆಂಡರಿನಲ್ಲಿ ಭಾಗವಹಿಸಲಿಚ್ಚಿಸುವ ಗುತ್ತಿಗೆದಾರರು, ಉದ್ದೇಶಿಸಿರುವ ಕ್ರ.ಸಂ. (2), (3), (4)ರ ಕಾಮಗಾರಿಯ ಶೇ. 30ರಷ್ಟು ಮೊತ್ತದ ಇದೇ ತರಹದ ಕಾಮಗಾರಿಯನ್ನು (ಕಟ್ಟಡ) ಕಳೆದ ಐದು ವರ್ಷಗಳ ಅವಧಿಯ ಒಂದು ಆರ್ಥಿಕ ವರ್ಷದಲ್ಲಿ ಪೂರೈಸಿರತಕ್ಕದ್ದು. ಈ ಕುರಿತ ಪ್ರಮಾಣಪತ್ರವನ್ನು ಸಕ್ಷಮ ಅಧಿಕಾರಿಯವರಿಂದ ಪಡೆದು ಅರ್ಜಿಯೊಂದಿಗೆ ಸಲ್ಲಿಸತಕ್ಕದ್ದು.
6) ಸೂಚಿತ ಕಾಮಗಾರಿಯ ಮೊತ್ತ ಮತ್ತು ಇ.ಎಂ.ಡಿ. ಮೊತ್ತ ಬದಲಾವಣೆಯಾಗುವ ಸಾಧ್ಯತೆ ಇರುತ್ತದೆ. ಕಾಮಗಾರಿಯ ಮೊತ್ತ ಮತ್ತು ಇ.ಎಂ.ಡಿ. ಮೊತ್ತ ಟೆಂಡರ್ ಶೆಡ್ಯೂಲ್‌ನಲ್ಲಿ ನಮೂದಿಸಿದಂತಿರುತ್ತದೆ.
7) ಗುತ್ತಿಗೆದಾರರು, ಕಾಮಗಾರಿಗೆ ಬೇಕಾದ ಎಲ್ಲಾ ಯಂತ್ರೋಪಕರಣ ಹಾಗೂ ಸಲಕರಣೆಗಳನ್ನು ತಾವೇ ಒದಗಿಸಿಕೊಳ್ಳತಕ್ಕದ್ದು.

ಕಾರ್ಯನಿರ್ವಾಹಕ ಇಂಜಿನಿಯರರು,
ಲೋ. ಬಂ ಹಾಗೂ ಒ.ಜ.ಸಾ.ಇಲಾಖೆ,
ಉಡುಪಿ ವಿಭಾಗ, ಉಡುಪಿ.

ಪಿ.ಆರ್. 755

## ಉದ್ಯೋಗ ಮತ್ತು ತರಬೇತಿ ಇಲಾಖೆ

## ಪ್ರಾಚಾರ್ಯರ ಕಛೇರಿ ಕೈಗಾರಿಕಾ ತರಬೇತಿ ಸಂಸ್ಥೆ, ತುಮಕೂರು ರಸ್ತೆ, ಬೆಂಗಳೂರು-22

### ಪ್ರಕಟಣೆ

**ಸಂ.ಕೈತಸಂ.ಬೆಂ-22:ಕಟ್ಟಡ:ಉಗ್ರ/07-08, ದಿನಾಂಕ: 15ನೇ ನವೆಂಬರ್ 2007**

**ವಿಷಯ:** ಕೈಗಾರಿಕಾ ತರಬೇತಿ ಸಂಸ್ಥೆ, ತುಮಕೂರು ರಸ್ತೆ, ಬೆಂಗಳೂರು-22. ಇಲ್ಲಿನ ಸಸ್ಯಹಾರಿ ಉಪಹಾರ ಮಂದಿರ (ಕ್ಯಾಂಟೀನ್) ನನ್ನು ಬಾಡಿಗೆ ಆಧಾರದ ಮೇಲೆ ಟೆಂಡರ್ ಪ್ರಕಟಣೆ ಬಗ್ಗೆ.

ಕೈಗಾರಿಕಾ ತರಬೇತಿ ಸಂಸ್ಥೆ, ತುಮಕೂರು ರಸ್ತೆ, ಬೆಂಗಳೂರು-22, ಇಲ್ಲಿನ ಸಸ್ಯಹಾರಿ ಉಪಹಾರ ಮಂದಿರ (ಕ್ಯಾಂಟೀನ್) ನನ್ನು ಮಾಸಿಕ ಬಾಡಿಗೆ ಆಧಾರದ ಮೇಲೆ ನಿಬಂಧನೆಗೊಳಪಟ್ಟು ನಡೆಸಲು ಈ ಮೂಲಕ ಟೆಂಡರ್ ಕರೆಯಲಾಗಿದೆ. ಟೆಂಡರ್ ಫಾರಂಗಳನ್ನು ಸದರಿ ಸಂಸ್ಥೆಯ ಕಛೇರಿಯಲ್ಲಿ ಎಲ್ಲಾ ಕೆಲಸದ ದಿನಗಳಲ್ಲಿ ದಿನಾಂಕ:01.12.2007 ರಿಂದ ನೀಡಲಾಗುವುದು. ಭರ್ತಿ ಮಾಡಿದ ಟೆಂಡರ್‌ಗಳನ್ನು ಸ್ವೀಕರಿಸಲು ಕೊನೆಯ ದಿನಾಂಕ: 31.12.2007, 3.00 ಗಂಟೆಯಾಗಿರುತ್ತದೆ. ಸಲ್ಲಿಸಿರುವ ಟೆಂಡರ್‌ದಾರರ ಸಮ್ಮುಖದಲ್ಲಿ ದಿನಾಂಕ: 02.01.08 ರಂದು ಸಂಜೆ 4.30 ಗಂಟೆಗೆ ಟೆಂಡರ್‌ದಾರರು ಭಾಗವಹಿಸಬಹುದು. ಟೆಂಡರ್ ಅರ್ಜಿ ಬೆಲೆ ರೂ 50/- (ರೂ ಐವತ್ತು ಮಾತ್ರ) ಮತ್ತು ಇ.ಎಂ.ಡಿ. ಮೊತ್ತ ರೂ 500/- (ರೂ ಐದುನೂರು ಮಾತ್ರ ಆಗಿರುತ್ತದೆ.)

ಪ್ರಾಚಾರ್ಯರು ಕೈಗಾರಿಕಾ ತರಬೇತಿ ಸಂಸ್ಥೆ,
ತುಮಕೂರು ರಸ್ತೆ, ಬೆಂಗಳೂರು - 560 022

ಪಿ.ಆರ್. 714

**ಲೋಕೋಪಯೋಗಿ ಇಲಾಖೆ**

**ರಾಷ್ಟ್ರೀಯ ಹೆದ್ದಾರಿ ವಿಭಾಗ, ಚಿತ್ರದುರ್ಗ**

**ನಂ.ಇಎನ್‌ಹೆಚ್/ಚಿ/ಸ.ಇ-2/ಟೆಂ.ಪ್ರ./ಅಗಲೀಕರಣ ರಾಹೆ 13/07-08/3348, ದಿನಾಂಕ: 19ನೇ ನವೆಂಬರ್ 2007**

**ರಾಷ್ಟ್ರೀಯ ಸ್ಪರ್ಧಾತ್ಮಕ ಬಿಡ್ಡಿಂಗ್**

**{(ಬಿಡ್‌ಗಾಗಿ ಆಹ್ವಾನ)(ಐಎಫ್‌ಬಿ)}**

ಮೊಹರಾದ ಐಟಂವಾರು ದರದ ಟೆಂಡರುಗಳನ್ನು ಕೆಳಗೆ ಕಾಣಿಸಿದ ಕೆಲಸಕ್ಕೆ ಎರಡು ಲಕೋಟೆ ಪದ್ಧತಿಯಲ್ಲಿ ಕರ್ನಾಟಕ ಸಾರ್ವಜನಿಕ ಸಂಗ್ರಹಣೆ ಪಾರದರ್ಶಕತೆ ಅಧ್ಯಾದೇಶ 2000 ನಿಯಮದಂತೆ ದ್ವಿಪ್ರತಿಯಲ್ಲಿ ಕರ್ನಾಟಕ ಲೋಕೋಪಯೋಗಿ ಇಲಾಖೆಯಲ್ಲಿ ಹೆಸರನ್ನು ನೊಂದಾಯಿಸಿದ ಒಂದನೇ ದರ್ಜೆಯ ಅರ್ಹ ಗುತ್ತಿಗೆದಾರರಿಂದ ಹಾಗೂ ಕೇಂದ್ರ ಭೂಸಾರಿಗೆ ಮಂತ್ರಾಲಯದಿಂದ ಅನುಮೋದಿತ ಸಂಸ್ಥೆಗಳಿಂದ ಆಹ್ವಾನಿಸಲಾಗಿದೆ. ಎರಡು ಲಕೋಟೆ ಪದ್ಧತಿಯಲ್ಲಿ (1) ತಾಂತ್ರಿಕ ಬಿಡ್ (ಭಾಗ-1) ಮತ್ತು (2) ಆರ್ಥಿಕ ಬಿಡ್ (ಭಾಗ-2) ಗಳಾಗಿರುತ್ತವೆ. ಬಿಡ್‌ಗಳನ್ನು ಎರಡು ಭಾಗಗಳಲ್ಲಿ ಎರಡು ಮೊಹರಾದ ಹಾಗೂ ತಾಂತ್ರಿಕ ಬಿಡ್ ಮತ್ತು ಆರ್ಥಿಕ ಬಿಡ್ ಎಂದು ಪ್ರತ್ಯೇಕವಾಗಿ ನಮೂದಿಸಲ್ಪಟ್ಟ ಲಕೋಟೆಗಳನ್ನು ಮತ್ತೊಂದು ಮೊಹರಾದ ಲಕೋಟೆಯಲ್ಲಿಟ್ಟು ಹಾಗೂ ಕೆಲಸದ ಹೆಸರನ್ನು ನಮೂದಿಸಲ್ಪಟ್ಟ ಗುತ್ತಿಗೆದಾರರ ಪೂರ್ಣ ಅಂಚೆ ವಿಳಾಸದೊಂದಿಗೆ ಕೆಳಗೆ ಸಹಿ ಮಾಡಿರುವ ಅಧಿಕಾರಿಗಳಿಗೆ ವಿಳಾಸಿಸಿ ಸಲ್ಲಿಸುವುದು. ಪೂರ್ಣ ಪ್ರಮಾಣದ ಬಿಡ್‌ಗಳನ್ನು ಅಧೀಕ್ಷಕ ಅಭಿಯಂತರರು, ರಾಷ್ಟ್ರೀಯ ಹೆದ್ದಾರಿ ವೃತ್ತ, ಬೆಂಗಳೂರು ಅಥವಾ ಕಾರ್ಯಪಾಲಕ ಅಭಿಯಂತರರು, ರಾಷ್ಟ್ರೀಯ ಹೆದ್ದಾರಿ ವಿಭಾಗ, ಚಿತ್ರದುರ್ಗ ಇವರ ಕಛೇರಿಯಲ್ಲಿ ದಿನಾಂಕ:04.01.2008 ರಂದು ಸಾಯಂಕಾಲ 4.00 ಗಂಟೆಯವರೆಗೆ ಕೇಂದ್ರ ಭೂಸಾರಿಗೆ ಸಚಿವಾಲಯದ ಸ್ಟಾಂಡರ್ಡ್ ಬಿಡ್ ಡಾಕ್ಯುಮೆಂಟ್ ಷೆಡ್ಯೂಲ್‌ನ ನಿಬಂಧನೆಗಳು ಹಾಗೂ ಕರ್ನಾಟಕ ಸಾರ್ವಜನಿಕ ಸಂಗ್ರಹಣೆ ಪಾರದರ್ಶಕತೆ ಅಧ್ಯಾದೇಶ 2000 ನಿಯಮದ ನಿಬಂಧನೆಗೊಳಪಟ್ಟು ಸ್ವೀಕರಿಸಲಾಗುವುದು. ತಾಂತ್ರಿಕ ಬಿಡ್ ಭಾಗ-1 ನ್ನು ಈ ಕೆಳಗೆ ಕಾಣಿಸಿದ ದಿನಾಂಕದಂದು ಕಾರ್ಯನಿರ್ವಾಹಕ ಇಂಜಿನಿಯರ್, ರಾಷ್ಟ್ರೀಯ ಹೆದ್ದಾರಿ ವಿಭಾಗ, ಚಿತ್ರದುರ್ಗ ಇವರ ಕಛೇರಿಯಲ್ಲಿ ತೆರೆಯಲಾಗುವುದು. ತಾಂತ್ರಿಕ ಬಿಡ್‌ನಲ್ಲಿ ಅರ್ಹರಾದಂಥ ಗುತ್ತಿಗೆದಾರರ ಆರ್ಥಿಕ ಬಿಡ್ ಲಕೋಟೆಗಳನ್ನು ಮಾತ್ರ ತೆರೆಯಲಾಗುತ್ತದೆ. ಈ ಕೆಳಗೆ ಕಾಣಿಸಿದ ದಿನಗಳಲ್ಲಿ ಯಾವುದಾದರೂ ರಜಾ ದಿನವಾದಲ್ಲಿ, ಮುಂದೆ ಸೂಕ್ತ ದಿನಾಂಕವನ್ನು ತಿಳಿಸಲಾಗುವುದು.

ಟೆಂಡರು ಕರೆ ಸಂಖ್ಯೆ :: ಮೊದಲನೇ ಕರೆ

| ಕ್ರ. ಸಂ. | ಕೆಲಸದ ಹೆಸರು | ಟೆಂಡರಿಗೆ ನಿಗದಿಪಡಿಸಿದ ಅಂದಾಜು ಮೊತ್ತ (ರೂ. ಲಕ್ಷಗಳಲ್ಲಿ) | ಇಡುಗಂಟು (ಇಎಂಡಿ) (ಮೊತ್ತ ರೂ. ಲಕ್ಷಗಳಲ್ಲಿ) | ಖಾಲಿ ಟೆಂಡರ್ ಫಾರ್ಮಿನ ಬೆಲೆ ಸೆಟ್ಟಿಗೆ + ಟ್ಯಾಕ್ಸ್ ಮರು ಪಾವತಿಯಾಗದ | ಕೆಲಸದ ಸ್ವರೂಪ | ಕಾಮಗಾರಿ ಪೂರ್ಣಗೊಳಿಸುವ ಕಾಲಾವಧಿ (ಮಳೆಗಾಲ ಸಹಿತ) |
|---|---|---|---|---|---|---|
| 1. | ರಾಷ್ಟ್ರೀಯ ಹೆದ್ದಾರಿ - 13 ಚಿತ್ರದುರ್ಗ-ಮಂಗಳೂರು ಸೆಕ್ಷನ್ನನ ಕಿ.ಮಿ. 479.00 ರಿಂದ 489.840 ರವರೆಗೆ ಹಾಲಿ ಇರುವ ಇಂಟರ್ ಮಿಡಿಯಟ್/ ಏಕ ಪಥದ ರಸ್ತೆಯನ್ನು ದ್ವಿಪಥಕ್ಕೆ ಅಗಲೀಕರಿಸುವ ಹಾಗೂ ಬಲವರ್ಧನೆ ಮತ್ತು 9 ಮೋರಿಗಳ ಮರು ನಿರ್ಮಾಣದ ಕಾಮಗಾರಿ. | ರೂ. 1094.60 | ರೂ. 21.90 | ರೂ.60000+12.5% ವ್ಯಾಟ್ | ಜಿ.ಎಸ್.ಬಿ. ಡಬ್ಲ್ಯೂ.ಎಂ.ಎಂ. ಬಿ.ಎಂ. ಮತ್ತು ಎಸ್.ಡಿ.ಬಿ.ಸಿ. ಮತ್ತು ಸಿ.ಡಿ. ಕಾಮಗಾರಿಗಳು | 24 ತಿಂಗಳು |

**ಷರತ್ತುಗಳು:-** 1) ಕೆಲಸಕ್ಕೆ ಬಿಡ್ ಮಾಡಲು ಆಸಕ್ತಿ ಇರುವ ಗುತ್ತಿಗೆದಾರರು ಅರ್ಜಿಯನ್ನು ಖಾಲಿ ಟೆಂಡರ್ ಫಾರಂಗೆ ನಿಗದಿಪಡಿಸಿರುವ ಮೊತ್ತವನ್ನು (ಹಿಂದಿರುಗಿಸಲಾಗದ) ನಗದು ಅಥವಾ ಡಿ.ಡಿ.ಯನ್ನು ಕಾರ್ಯನಿರ್ವಾಹಕ ಅಭಿಯಂತರರು ರಾಷ್ಟ್ರೀಯ ಹೆದ್ದಾರಿ ವಿಭಾಗ, ಚಿತ್ರದುರ್ಗ ಇವರ ಹೆಸರಿಗೆ ಮತ್ತು ಚಿತ್ರದುರ್ಗದಲ್ಲಿ ಪಾವತಿಯಾಗುವಂತೆ, ಕೆಳಗೆ ಸಹಿ ಮಾಡಿರುವವರ ಕಛೇರಿಗೆ ಸಲ್ಲಿಸತಕ್ಕದ್ದು. ಗುತ್ತಿಗೆದಾರರು ಗುತ್ತಿಗೆದಾರರ ನೊಂದಾವಣೆ ಪತ್ರದ ಪ್ರತಿ, ಇತ್ತೀಚಿನ ಕರ್ನಾಟಕ ಮಾರಾಟ ತೆರಿಗೆ ತೀರುವಳಿ ಪ್ರಮಾಣ ಪತ್ರವನ್ನು (ಸಂಬಂಧಪಟ್ಟ ಇಲಾಖೆಯಿಂದ ಪಡೆದು) ಹಾಗೂ ಕಾಮಗಾರಿಗೆ ನಿಗದಿಪಡಿಸಿದ ಯಂತ್ರೋಪಕರಣಗಳ ಮಾಲೀಕತ್ವದ ಪ್ರಮಾಣ ಪತ್ರಗಳು, ಈ ಎಲ್ಲಾ ದಾಖಲೆಗಳನ್ನು, ಟೆಂಡರ್ ಬಿಡ್‌ಗಾಗಿ ಸಲ್ಲಿಸುವ ಅರ್ಜಿ ಜೊತೆ ದೃಢೀಕರಿಸಿದ ಪ್ರತಿಗಳನ್ನು ಅರ್ಜಿಯ ಜೊತೆಯಲ್ಲಿ ಕಡ್ಡಾಯವಾಗಿ ಸಲ್ಲಿಸತಕ್ಕದ್ದು. ತಪ್ಪಿದಲ್ಲಿ ಅರ್ಜಿಗಳನ್ನು ಪರಿಗಣಿಸಲಾಗುವುದಿಲ್ಲ.

**2) ಟೆಂಡರು ದಿನಾಂಕಗಳ ವಿವರಗಳು ಈ ಕೆಳಕಂಡಂತಿವೆ.**

| | | | |
|---|---|---|---|
| ಅ) | ಖಾಲಿ ಟೆಂಡರ್ ಫಾರಂಗಳಿಗಾಗಿ ಅರ್ಜಿ ಸಲ್ಲಿಸುವ ಹಾಗೂ ಖಾಲಿ ಟೆಂಡರ್ ಫಾರಂಗಳನ್ನು ನೀಡುವ ದಿನಾಂಕ: | : | 26.12.2007 ರವರೆಗೆ ಸಂಜೆ 4.00 ಗಂಟೆಯವರೆಗೆ |
| ಆ) | ಪ್ರಿ ಬಿಡ್ ಮೀಟಿಂಗ್ (ಅಧೀಕ್ಷಕ ಅಭಿಯಂತರರ ಕಛೇರಿ, ರಾಷ್ಟ್ರೀಯ ಹೆದ್ದಾರಿ ವೃತ್ತ, ಬೆಂಗಳೂರಿನಲ್ಲಿ) | : | 29.12.2007 ಬೆಳಿಗ್ಗೆ 11.00 ಗಂಟೆಯವರೆಗೆ |
| ಇ) | ಟೆಂಡರ್ ಬಿಡ್ ಸಲ್ಲಿಸುವ ಕೊನೆಯ ದಿನಾಂಕ: | : | 04.01.2008 ಸಂಜೆ 4.00 ಗಂಟೆಯವರೆಗೆ |
| ಈ) | ತಾಂತ್ರಿಕ ಬಿಡ್‌ಗಳನ್ನು ತೆರೆಯುವ ದಿನಾಂಕ: | : | 04.01.2008 ಸಾಯಂಕಾಲ 4.30 ಗಂಟೆಗೆ ಅಥವಾ ಮುಂದೆ ತಿಳಿಸುವ ಇನ್ನಾವುದೇ ದಿನಾಂಕ |

**ತಾಂತ್ರಿಕ ಬಿಡ್‌ಗಳಿಗೆ ಷರತ್ತುಗಳು**

1. ಇ.ಎಂ.ಡಿ. ಮೊತ್ತವನ್ನು ಕಾರ್ಯಪಾಲಕ ಅಭಿಯಂತರರು, ರಾಷ್ಟ್ರೀಯ ಹೆದ್ದಾರಿ ವಿಭಾಗ, ಚಿತ್ರದುರ್ಗ ಇವರ ಹೆಸರಿನಲ್ಲಿ ಪಡೆದು ಡಿ.ಡಿ:ಎಫ್.ಡಿ.ಆರ್. ಪೇ ಆರ್ಡರ್ : ರಾಷ್ಟ್ರೀಕೃತ ಬ್ಯಾಂಕ್ ಹಾಗೂ ಷೆಡ್ಯೂಲ್ಡ್ ಬ್ಯಾಂಕ್‌ಗಳಿಂದ ಪಡೆದ ಬ್ಯಾಂಕ್ ಗ್ಯಾರಂಟಿ, ಅಥವಾ ರಾಷ್ಟ್ರೀಯ ಉಳಿತಾಯ ಪತ್ರ (ಕಾರ್ಯಪಾಲಕ ಅಭಿಯಂತರರು, ರಾಷ್ಟ್ರೀಯ ಹೆದ್ದಾರಿ ವಿಭಾಗ, ಚಿತ್ರದುರ್ಗ ಇವರ ಹೆಸರಿನಲ್ಲಿ ಒತ್ತೆ ಇಡತಕ್ಕದ್ದು) ವನ್ನು ತಾಂತ್ರಿಕ ಬಿಡ್ ಜೊತೆಯಲ್ಲಿ ಸಲ್ಲಿಸತಕ್ಕದ್ದು. ಇ.ಎಂ.ಡಿ.ಯನ್ನು ಬೇರಾವುದೇ ಹೆಸರಿನಲ್ಲಿ ಪಡೆದ ಅಥವಾ ಒತ್ತೆ ಇಡಲಾದಲ್ಲಿ ತಾಂತ್ರಿಕ ಬಿಡ್‌ಗಳನ್ನು ಯಾವುದೇ ವಿಚಾರಣೆ ಅಥವಾ ವಿವರಣೆಯನ್ನು ಮಾಡದೆ, ಅನರ್ಹಗೊಳಿಸಲಾಗುವುದು. ಬ್ಯಾಂಕ್ ಗ್ಯಾರಂಟಿಯು ಕಡ್ಡಾಯವಾಗಿ ಸ್ಟಾಂಡರ್ಡ್ ಬಿಡ್ ಡಾಕ್ಯುಮೆಂಟ್‌ನ ಫಾರಂಗೆ ಅನುಗುಣವಾಗಿರತಕ್ಕದ್ದು.
2. ಈ ಟೆಂಡರಿನಲ್ಲಿ ಕರೆಯಲಾಗಿರುವ ಕಾಮಗಾರಿಯ ಡಿಫೆಕ್ಟ್ ಲಯಾಬಲಿಟಿ ಸಮಯವು ಕಾಮಗಾರಿ ಪೂರ್ಣಗೊಳಿಸಿದ ದಿನಾಂಕದಿಂದ ಒಂದು ವರ್ಷವಾಗಿರುತ್ತದೆ. ಕಾಮಗಾರಿಯಲ್ಲಿ ನಿರ್ವಹಿಸಬೇಕಾದ ಕೆಲಸಗಳು ಅತ್ಯುನ್ನತ ಗುಣಮಟ್ಟದಿಂದ ಕೂಡಿದ್ದು ಒಂದು ವರ್ಷದವರೆಗೆ ಯಾವುದೇ ರಿಪೇರಿಯ ಸಾಧ್ಯತೆಗಳಿರುವುದಿಲ್ಲ. ಈ ಮೇಲ್ಕಂಡ ರೀಚಿನ ಕಾಮಗಾರಿಗೆ ಈ ಒಂದು ವರ್ಷದ ಅವಧಿಯಲ್ಲಿ ಯಾವುದಾದರೂ ರಿಪೇರಿಯ ಅವಶ್ಯಕತೆ ಬಿದ್ದಲ್ಲಿ ಗುತ್ತಿಗೆದಾರರು/ ಸಂಸ್ಥೆಗಳವರು ಸದರಿ ರಿಪೇರಿ ಅಥವಾ ಮರು ನಿರ್ಮಾಣವನ್ನು ಗುತ್ತಿಗೆದಾರರು/ ಸಂಸ್ಥೆಯ ಸ್ವಂತ ವೆಚ್ಚದಲ್ಲಿ ಮಾಡತಕ್ಕದ್ದು. ಇ.ಎಂ.ಡಿ. / ಎಸ್.ಡಿ. ಪರಿಕರಗಳನ್ನು ಮೇಲಿನ ಷರತ್ತಿಗನುಗುಣವಾಗಿ ಸಲ್ಲಿಸತಕ್ಕದ್ದು
3. ಪ್ರತಿ ಗುತ್ತಿಗೆದಾರರು ಈ ಕೆಳಕಂಡ ಯಂತ್ರೋಪಕರಣಗಳ ಮಾಲೀಕತ್ವವನ್ನು ಹೊಂದಿರಬೇಕು. ಹಾಗೂ ತಾಂತ್ರಿಕ ಬಿಡ್‌ನ ಜೊತೆಯಲ್ಲಿ ಸಂಬಂಧಪಟ್ಟ ಮಾಲೀಕತ್ವದ ಸಾಕ್ಷಿಯನ್ನು ಈ ಕೆಳಕಂಡಂತೆ ಸಲ್ಲಿಸತಕ್ಕದ್ದು. ಮೇಲಿನ ಮಾಲೀಕತ್ವದ ಸಾಕ್ಷಿಗಳಿಲ್ಲದ ತಾಂತ್ರಿಕ ಬಿಡ್‌ಗಳನ್ನು ಅನರ್ಹಗೊಳಿಸಲಾಗುವುದು.

| ಕ್ರ. ಸಂ. | ಯಂತ್ರೋಪಕರಣಗಳು | ಬೇಕಾದ ಸಂಖ್ಯೆ | ದಿನಾಂಕ:1.10.2007 ರಂದು ಯಂತ್ರೋಪಕರಣದ ವಯಸ್ಸು (Age of the machine on 1.11.2007) | ಮಾಲೀಕತ್ವದ ಪುರಾವೆಗಳು |
|---|---|---|---|---|
| 1. | 40/60 ಟಿ.ಪಿ.ಹೆಚ್. ಅಥವಾ ಹೆಚ್ಚಿನ ಸಾಮರ್ಥ್ಯದ ಹಾಟ್ ಮಿಕ್ಸ್ ಪ್ಲಾಂಟ್ (ಎಂ.ಓ.ಆರ್.ಟಿ. & ಹೆಚ್ ಸ್ಪೆಸಿಫಿಕೇಷನ್‌ಗೆ ಅನುಗುಣವಾಗಿ) | ಒಂದು (1) | 5 ವರ್ಷಗಳು | ಖರೀದಿಸಿದ ಇನ್ ವಾಯ್ಸ್ : ಸೆಲ್‌ಡೀಡ್ (ಖರೀದಿದಾರರಿಂದ ಪಡೆದ ಮೂಲ ಇನ್ ವಾಯ್ಸ್‌ನೊಂದಿಗೆ) |
| 2. | ಮೆಕ್ಯಾನಿಕಲ್ ಪೇವರ್ ಫಿನೀಷರ್ | ಒಂದು (1) | 5 ವರ್ಷಗಳು | -ಸದರಿ- |
| 3. | ಪಗ್ ಮಿಲ್ | ಒಂದು (1) | 5 ವರ್ಷಗಳು | -ಸದರಿ- |
| 4. | ಮೋಟಾರ್ ಗ್ರೇಡರ್ | ಎರಡು (2) | 5 ವರ್ಷಗಳು | -ಸದರಿ- |
| 5. | ಡೋಜರ್ | ಒಂದು (1) | 5 ವರ್ಷಗಳು | -ಸದರಿ- |
| 6. | ಫ್ರಂಟ್ ಎಂಡ್ ಲೋಡರ್ | ಒಂದು (1) | 5 ವರ್ಷಗಳು | -ಸದರಿ- |
| 7. | ವಾಟರ್ ಟ್ಯಾಂಕರ್ | ಎರಡು (2) | 5 ವರ್ಷಗಳು | -ಸದರಿ- |
| 8. | ವೈಬ್ರೇಟರಿ ರೋಡ್ ರೋಲರ್ | ಎರಡು (2) | 5 ವರ್ಷಗಳು | -ಸದರಿ- |
| 9. | ಸ್ಟ್ಯಾಟಿಕ್ ರೋಡ್ ರೋಲರ್ | ಎರಡು (2) | 5 ವರ್ಷಗಳು | -ಸದರಿ- |
| 10. | ಮೆಕ್ಯಾನಿಕಲ್ ಸ್ಪ್ರೇಯರ್ | ಎರಡು (2) | 5 ವರ್ಷಗಳು | -ಸದರಿ- |
| 11. | ಕಾಂಕ್ರೀಟ್ ಮಿಕ್ಸರ್ ವಿತ್ ಹೋಪ್ಪರ್ | ಎರಡು (2) | 5 ವರ್ಷಗಳು | -ಸದರಿ- |
| 12. | ನೀಡಲ್ ವೈಬ್ರೇಟರ್ | ಎರಡು (2) | 5 ವರ್ಷಗಳು | -ಸದರಿ- |
| 13. | ಎಕ್ಸ್‌ವೇಟರ್ | ಒಂದು (1) | 5 ವರ್ಷಗಳು | -ಸದರಿ- |
| 14. | ಟಿಪ್ಪರ್ | ನಾಲ್ಕು (4) | 5 ವರ್ಷಗಳು | ಆರ್.ಟಿ.ಓ. ರವರಿಂದ ಪಡೆದ ರಿಜಿಸ್ಟ್ರೇಷನ್ ಸರ್ಟಿಫಿಕೇಟ್ |

4. ಪ್ರತಿ ಗುತ್ತಿಗೆದಾರರು (ಟೆಂಡರ್ ಮೊತ್ತಕ್ಕೆ ಶೇಕಡ 90ಕ್ಕೆ ಕಡಿಮೆಯಿಲ್ಲದ್ದಂತೆ) ಇದೇ ತರಹದ ಕಾಮಗಾರಿಯನ್ನು, ಪ್ರೈಮ್ ಗುತ್ತಿಗೆದಾರರಾಗಿ (ಅಥವಾ ನಾಮ ನಿರ್ದೇಶಿಸಲ್ಪಟ್ಟ ಉಪ-ಗುತ್ತಿಗೆದಾರರಾಗಿ ಉಪ ಗುತ್ತಿಗೆಯ ಬಿಡ್ ಡಾಕ್ಯುಮೆಂಟ್‌ನಲ್ಲಿನ ಎಲ್ಲಾ ಮುಖ್ಯ ಐಟಂಗಳನ್ನು ನಿರ್ವಹಿಸಲು ಇತರೆ ಎಲ್ಲಾ ಅರ್ಹತೆಗಳು ಇದ್ದಲ್ಲಿ) ಪೂರ್ಣಗೊಳಿಸಿರತಕ್ಕದ್ದು. ಮೇಲಿನ ಕಾಮಗಾರಿಗೆ ನಿಗದಿಪಡಿಸಲಾದ ಅಂದಾಜು ಮೊತ್ತದ (ಸಾಮಾನ್ಯವಾಗಿ ಅಂದಾಜು ಮೊತ್ತಕ್ಕೆ ಶೇ. 50 ಕಡಿಮೆ ಇಲ್ಲದಂತೆ) ಕನಿಷ್ಟ ಒಂದು ಕಾಮಗಾರಿಯನ್ನು ನಿರ್ವಹಿಸಿರತಕ್ಕದ್ದು. ಈ ಬಗ್ಗೆ ಸಲ್ಲಿಸಲಾಗುವ ಅನುಭವ ಪ್ರಮಾಣ ಪತ್ರಗಳಲ್ಲಿ ನಿರ್ವಹಿಸಿದ ಕಾಮಗಾರಿಯ ಸ್ವರೂಪ/ಐಟಂಗಳು/ ಕಾಮಗಾರಿಯನ್ನು ಪ್ರಾರಂಭಿಸಿದ ದಿನಾಂಕ ಮತ್ತು ಪೂರ್ಣಗೊಳಿಸಿದ ದಿನಾಂಕ ಇತ್ಯಾದಿ ವಿವರಗಳನ್ನೊಳಗೊಂಡಿರಬೇಕು ಇಲ್ಲವಾದಲ್ಲಿ ಬಿಡ್ಡ್‌ನ್ನು ಅನರ್ಹಗೊಳಿಸಲಾಗುವುದು.

5. ಆರ್ಥಿಕ ಸಾಮರ್ಥ್ಯದ ಸಾಕ್ಷಿಯು, ಟೆಂಡರಿಗಿಟ್ಟ ಮೊತ್ತದ ಶೇಕಡಾ 30 ರಷ್ಟು ಪ್ರಮಾಣದ ಯಾವುದೇ ಷೆಡ್ಯೂಲ್ಡ್ ಬ್ಯಾಂಕಿನ "ಲೈನ್ ಆಫ್ ಕ್ರೆಡಿಟ್ ಅನ್ನು" ಕಡ್ಡಾಯವಾಗಿ ತಾಂತ್ರಿಕ ಬಿಡ್‌ನಲ್ಲಿ ನಿಗದಿಪಡಿಸಿದ ಪ್ರೊಫಾರ್ಮಾದಲ್ಲಿ ಸಲ್ಲಿಸತಕ್ಕದ್ದು. "ಲೈನ್ ಆಫ್ ಕ್ರೆಡಿಟ್ ಅನ್ನು" ಸಲ್ಲಿಸದಿದ್ದಲ್ಲಿ ತಾಂತ್ರಿಕ ಬಿಡ್‌ಗಳು ಅನರ್ಹಗೊಳ್ಳುತ್ತವೆ.
6. ಬಿಡ್ ಸೆಕ್ಯೂರಿಟಿ (ಇಎಂಡಿ)ಯನ್ನು ತಾಂತ್ರಿಕ ಬಿಡ್‌ನಲ್ಲಿ ನಮೂದಿಸಲಾದ ಫಾರಂನಂತೆ ಸಲ್ಲಿಸಬೇಕಾಗಿದ್ದು ಇದರ ಅವಧಿಯು ಬಿಡ್‌ನ ಅರ್ಹತಾ ಅವಧಿಗಿಂತ 45 ದಿನ ಹೆಚ್ಚಿರಬೇಕಾಗಿರುತ್ತದೆ. (180 + 45 ದಿನಗಳು)
7. ತಾಂತ್ರಿಕ ಬಿಡ್ ಜೊತೆಯಲ್ಲಿ ಲಗತ್ತಿಸುವ ಎಲ್ಲಾ ದಾಖಲಾತಿಗಳನ್ನು ಕಾರ್ಯಪಾಲಕ ಅಭಿಯಂತರವರಿಗೆ ಕಡಿಮೆ ಇಲ್ಲದ ಗೆಜೆಟೆಡ್ ಅಧಿಕಾರಿಯಿಂದ ದೃಢೀಕರಿಸಲ್ಪಟ್ಟಿರಬೇಕು. ಇಲ್ಲವಾದಲ್ಲಿ ಬಿಡ್‌ಗಳು ಅನರ್ಹಗೊಳ್ಳುತ್ತವೆ. ಮೂಲ ದಾಖಲಾತಿಗಳನ್ನು ಟೆಂಡರ್ ಪ್ರಕ್ರಿಯೆಯ ಯಾವುದೇ ಮಟ್ಟದಲ್ಲಿ ಪರಿಶೀಲನೆಗಾಗಿ ಕೇಳಿದಾಗ ಒದಗಿಸತಕ್ಕದ್ದು. ಮೂಲ ದಾಖಲಾತಿಗಳನ್ನು ಪರಿಶೀಲನೆಗಾಗಿ ಕೇಳಿದಾಗ ಒದಗಿಸದಿದ್ದಲ್ಲಿ ತಾಂತ್ರಿಕ ಬಿಡ್‌ಗಳನ್ನು ಅನರ್ಹಗೊಳಿಸಲಾಗುವುದು.
8. ಕಾಮಗಾರಿಗೆ ಸಂಬಂಧಪಟ್ಟ ದಾಖಲಾತಿಗಳನ್ನು ಮತ್ತು ವಿವರಣೆಗಳನ್ನು ತಾಂತ್ರಿಕ ಬಿಡ್ ಜೊತೆಯಲ್ಲಿ ಒದಗಿಸತಕ್ಕದ್ದು. ಕಂಪನಿಯ ವಿವರಗಳು : ಏಜೆನ್ಸಿಗಳು : ಸಂಸ್ಥೆಯ ಪ್ರೊಫೈಲ್ ಅನ್ನು ಲಗತ್ತಿಸಬೇಕಾಗಿರುವುದಿಲ್ಲ.
9. ಯಶಸ್ವಿ ಗುತ್ತಿಗೆದಾರರು ಫೀಲ್ಡ್ ಲ್ಯಾಬರೋಟರಿಯನ್ನು ಇಂಜಿನಿಯರ್‌ಗಳ ಸೈಟ್ ಕಛೇರಿಯ ಪಕ್ಕದಲ್ಲೇ ಇರುವಂತೆ ಸ್ಥಾಪಿಸತಕ್ಕದ್ದು ಮತ್ತು ಕ್ಲಾಸ್ 120.2ನಲ್ಲಿ ಸೂಚಿಸಿರುವಂತೆ ಬೇಕಾಗಿರುವ ಸೌಲಭ್ಯಗಳನ್ನು ಒದಗಿಸತಕ್ಕದ್ದು. ಇಲ್ಲವಾದಲ್ಲಿ ಕಾಮಗಾರಿಯ ಮೊತ್ತಕ್ಕೆ ಶೇ.1 ರಂತೆ ದಂಡ ವಿಧಿಸಲಾಗುವುದು.
10. ಯಶಸ್ವಿ ಗುತ್ತಿಗೆದಾರರು ಸೈಟ್ ಇಂಜಿನಿಯರ್‌ಗಳನ್ನು ನೇಮಿಸಲು ವಿಫಲರಾದಲ್ಲಿ ಪ್ರತಿ ತಿಂಗಳು ರೂ 7500-00ರನ್ನು ಕಾಮಗಾರಿ ಮುಗಿಯುವ ತನಕ ದಂಡವಾಗಿ ವಸೂಲಿ ಮಾಡಲಾಗುವುದು.
11. ಜಾಯಿಂಟ್ ವೆಂಚರ್ ಟೆಂಡರ್‌ಗಳನ್ನು ಅಂಗೀಕರಿಸಲಾಗುವುದಿಲ್ಲ.
12. ಯಾವುದೇ ಗುತ್ತಿಗೆದಾರರು ಈ ವಿಭಾಗದಿಂದ ಈ ಹಿಂದೆ ಎರಡು ಅಥವಾ ಹೆಚ್ಚಿನ ಕಾಮಗಾರಿಗಳಿಗೆ ಟೆಂಡರ್ ಬಿಡ್‌ಗಳನ್ನು ಖರೀದಿಸಿ, ಟೆಂಡರ್ ಪ್ರಕ್ರಿಯೆಯಲ್ಲಿ ಭಾಗವಹಿಸದೇ ಇದ್ದ ಪಕ್ಷದಲ್ಲಿ ಅಂತಹ ಟೆಂಡರ್‌ದಾರರಿಗೆ ಅರ್ಜಿಗಳನ್ನು ನೀಡಲಾಗುವುದಿಲ್ಲ,
13. ಗುತ್ತಿಗೆದಾರರು, ಗುತ್ತಿಗೆ ರಿಜಿಸ್ಟ್ರೇಷನ್ ಪಾಸ್ ಬುಕ್‌ನ್ನು ಖಾಲಿ ಗುತ್ತಿಗೆ ಬಿಡ್ಡ್‌ಗಳನ್ನು ಪಡೆಯುವ ಸಮಯದಲ್ಲಿ ಹಾಗೂ ಕೆಲಸದ ಆದೇಶ ನೀಡುವ ಸಮಯದಲ್ಲಿ ಭಾಗ-II ಮತ್ತು ಭಾಗ-III ರಲ್ಲಿ ಅವಶ್ಯಕ ವಿವರಗಳನ್ನು ದಾಖಲಿಸಲು ಸಲ್ಲಿಸತಕ್ಕದ್ದು. ಹಾಗೂ ಅವಶ್ಯಕತೆ ಇದ್ದಲ್ಲಿ ಪಾಸ್ ಪುಸ್ತಕಗಳಲ್ಲಿನ ಕಾಲಂಗಳಲ್ಲಿನ ವಿವರಗಳನ್ನು ನಮೂದಿಸಲು ಒದಗಿಸತಕ್ಕದ್ದು.
14. ಟೆಂಡರ್ ಸಲ್ಲಿಸುವ ಸಮಯದಲ್ಲಿ ಗುತ್ತಿಗೆದಾರರು / ಕಂಪನಿ ಮಾಲೀಕರೇ ಹಾಜರಿರತಕ್ಕದ್ದು,
15. ಯಾವುದೇ ಅಥವಾ ಎಲ್ಲಾ ಟೆಂಡರ್‌ಗಳನ್ನು ಯಾವುದೇ ಕಾರಣವಿಲ್ಲದೇ ತಿರಸ್ಕರಿಸುವ ಹಕ್ಕು ಸಂಬಂಧಪಟ್ಟ ಅಧಿಕಾರಿಗಳಿಗೆ ಇರುತ್ತದೆ.
16. ಕರಾರುಗಳನ್ನೊಳಗೊಂಡ ಟೆಂಡರುಗಳನ್ನು ಸ್ವೀಕೃತಿಗಾಗಿ ಪರಿಗಣಿಸುವುದಿಲ್ಲ.
17. ಕರ್ನಾಟಕ ಸರ್ಕಾರದ ಆದೇಶದ ಸಂಖ್ಯೆ:ಎಲ್‌ಡಿ/300/ಎಲ್‌ಇಟಿ/2006 ಬೆಂಗಳೂರು ದಿನಾಂಕ: 18.01.2007 ಮತ್ತು ಕರ್ನಾಟಕ ಸರ್ಕಾರದ ಪತ್ರ ಸಂಖ್ಯೆ:ಲೋಇ/134/ಬಿಎಂಎಸ್/2007 ದಿನಾಂಕ: 27.07.2007ರನ್ವಯ ಗುತ್ತಿಗೆದಾರರಿಗೆ ಪಾವತಿಮಾಡುವ ಮೊತ್ತದ ಮೇಲೆ ಶೇಕಡ 1 ರಂತೆ ಕರ್ನಾಟಕ ರಾಜ್ಯ ಕಟ್ಟಡ ಮತ್ತು ಇತರೆ ನಿರ್ಮಾಣ ಕಾರ್ಮಿಕರ ಅಭಿವೃದ್ಧಿ ನಿಧಿಗಾಗಿ ಗುತ್ತಿಗೆದಾರ ಬಿಲ್ಲು ಮೊತ್ತದ ಮೇಲೆ ಕಟಾಯಿಸಿ ಸದರಿ ನಿಧಿಗೆ ಜಮಾ ಮಾಡಲಾಗುವುದು.
   ಮೇಲಿನ ಕೆಲಸಗಳ ಬಗ್ಗೆ ಯಾವುದೇ ಮಾಹಿತಿಯನ್ನು ಕೆಳಗೆ ಸಹಿ ಮಾಡಿದವರ ಕಛೇರಿಯಿಂದ ಕೆಲಸದ ವೇಳೆಯಲ್ಲಿ ಪಡೆಯಬಹುದು.

ಕಾರ್ಯಪಾಲಕ ಅಭಿಯಂತರು,
ರಾ.ಹೆ.ವಿಭಾಗ, ಚಿತ್ರದುರ್ಗ.

ಪಿ.ಆರ್. 720

## ಪೊಲೀಸ್ ಕಮೀಷನ್‌ರವರ ಕಛೇರಿ, ಬೆಂಗಳೂರು

### ಟೆಂಡರ್ ಪ್ರಕಟಣೆ

**ಸಂಖ್ಯೆ: ಸಂಗ್ರಹ-1/91/2007-08, ದಿನಾಂಕ: 29ನೇ ಅಕ್ಟೋಬರ್ 2007**

1. ಸಂಗ್ರಹಣಾ ಸಂಸ್ಥೆ - ಡೈರೆಕ್ಟರ್ ಜನರಲ್ ಮತ್ತು ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್, ಕರ್ನಾಟಕ ರಾಜ್ಯ, ಬೆಂಗಳೂರು
2. ಯೋಜನೆ - ಬೆಂಗಳೂರು ನಗರ ಪೊಲೀಸ್ ಕಮೀಷನರೇಟ್ ಘಟಕಕ್ಕೆ ಅವಶ್ಯಕವಾಗಿರುವ ಸರ್ವೆಲೆನ್ಸ್ ಕ್ಯಾಮರಾ ಸಂಪರ್ಕ ಜಾಲ ವ್ಯವಸ್ಥೆಗಳನ್ನು ಟೆಂಡರ್ ವ್ಯವಸ್ಥೆಗಳನ್ನು ಟೆಂಡರ್ ಮುಖಾಂತರ ಖರೀದಿ ಮಾಡುವ ಬಗ್ಗೆ.

ಬೆಂಗಳೂರು ನಗರ ಪೊಲೀಸ್ ಕಮೀಷನರೇಟ್ ಘಟಕಕ್ಕೆ ಅವಶ್ಯಕವಾಗಿರುವ ಸರ್ವೆಲೆನ್ಸ್ ಕ್ಯಾಮರಾ ಸಂಪರ್ಕ ಜಾಲ ವ್ಯವಸ್ಥೆಗಳನ್ನು ಟೆಂಡರ್ ಮುಖಾಂತರ ಖರೀದಿಸಲು ಮೊಹರು ಮಾಡಿರುವ ಟೆಂಡರ್ ಆಹ್ವಾನಿಸಲಾಗಿದೆ.

ಟೆಂಡರ್ ಅರ್ಜಿಗಳನ್ನು ಹಾಗೂ ಸರ್ವೆಲೆನ್ಸ್ ಕ್ಯಾಮರಾ ಸಂಪರ್ಕ ಜಾಲ ವ್ಯವಸ್ಥೆ ನಿರ್ದಿಷ್ಟತೆ/ವಿಶಿಷ್ಟತೆಯನ್ನು ದಿ:12.10.2007 ರಿಂದ ದಿ:26.10.2007 ರವರೆಗೆ ಪೊಲೀಸ್ ಆಯುಕ್ತರ ಕಛೇರಿ, ನಂ.1, ಭಗವಾನ್ ಮಹಾವೀರ್ ಜೈನ್ ರಸ್ತೆ, ಬೆಂಗಳೂರು ರವರಿಂದ ಬೆಳಿಗ್ಗೆ 10-00 ಗಂಟೆಯಿಂದ ಮಧ್ಯಾಹ್ನ 04-00 ಗಂಟೆಯವರೆಗೆ ಕಛೇರಿ ಕೆಲಸದ ದಿನಗಳಲ್ಲಿ ಪಡೆಯಬಹುದು ಎಂಬುದಾಗಿ ಪ್ರಕಟಿಸಲಾಗಿದ್ದು ಸದರಿ ದಿನಾಂಕಗಳನ್ನು ಮುಂದುವರಿಸಿ ದಿನಾಂಕ:24.12.2007 ರವರೆಗೆ ಮುಂದೂಡಲಾಗಿದೆ. ಪ್ರತಿ ಟೆಂಡರ್ ಅರ್ಜಿಯ ಬೆಲೆ ರೂ.500-00 (Non-refundable) ಹಣವನ್ನು ಡಿ.ಡಿ. ಮೂಲಕ, ಉಪ ಪೊಲೀಸ್ ಕಮೀಷನರ್ (ಆಡಳಿತ), ಬೆಂಗಳೂರು ನಗರ ಇವರ ಹೆಸರಿನಲ್ಲಿ ಪಾವತಿಸಿ ಅರ್ಜಿಯನ್ನು ಪಡೆಯತಕ್ಕದ್ದು. ಭರ್ತಿ ಮಾಡಿದ ಟೆಂಡರ್ ಅರ್ಜಿ ನಮೂನೆಗಳನ್ನು ಹಾಗೂ ಉಪಕರಣದ ಮೌಲ್ಯಕ್ಕೆ ಶೇಕಡ 2 ರಷ್ಟು ಇ.ಎಂ.ಡಿ. ಮುಂಗಡ ಠೇವಣಿಯನ್ನು ಉಪ ಪೊಲೀಸ್ ಕಮೀಷನರ್ (ಆಡಳಿತ), ಬೆಂಗಳೂರು ನಗರ ರವರ ಪದನಾಮದಲ್ಲಿ ಪಡೆಯತಕ್ಕದ್ದು. ಒಂದು ಲಕೋಟೆಯಲ್ಲಿ ಇ.ಎಂ.ಡಿ. ಡಿ.ಡಿ./ಬ್ಯಾಂಕ್ ಗ್ಯಾರಂಟಿ ಹಾಗೂ ದರಪಟ್ಟಿಗಳ ದಾಖಲಾತಿಯ ವಿವರಗಳನ್ನು ಹಾಗೂ ಮತ್ತೊಂದು ಲಕೋಟೆಯಲ್ಲಿ ಮಾದರಿಯ ಬ್ರೋಚರ್ಸ್, ಕ್ಯಾಟ್‌ಲಾಗ್ಸ್ ವಿತ್ ಟೆಕ್ನಿಕಲ್ ಸ್ಪೆಸಿಫಿಕೇಷನ್ ಮತ್ತು ಇತರೆ ಸಂಬಂಧಪಟ್ಟ ದಾಖಲಾತಿಗಳನ್ನು ಈ ಕಛೇರಿಯ ಶ್ರೀ ಬಿ.ಜಿ. ಜ್ಯೋತಿ ಪ್ರಕಾಶ್ ಮಿರ್ಜಿ ಐ.ಪಿ.ಎಸ್, ಅಪರ ಪೊಲೀಸ್ ಕಮೀಷನರ್ (ಆಡಳಿತ) ನಂ.1, ಭಗವಾನ್ ಮಹಾವೀರ್ ಜೈನ್ ರಸ್ತೆ, ಬೆಂಗಳೂರು ನಗರ ರವರಿಗೆ ವಿಳಾಸಿಸಿ ದಿ:24.12.2007 ರಂದು ಮಧ್ಯಾಹ್ನ 5-00 ಗಂಟೆಯೊಳಗೆ ಸಲ್ಲಿಸತಕ್ಕದ್ದು. ಸ್ವೀಕರಿಸಿದ ಟೆಂಡರ್‌ಗಳನ್ನು ದಿ:26.12.2007 ರಂದು ಬೆಳಿಗ್ಗೆ 11-00 ಗಂಟೆಗೆ ಈ ಕಛೇರಿಯಲ್ಲಿ ತೆರೆಯಲಾಗುವುದು. ಹೆಚ್ಚಿನ ವಿವರಗಳನ್ನು/ಷರತ್ತುಗಳನ್ನು ಟೆಂಡರ್ ಅರ್ಜಿಯೊಂದಿಗೆ ನೀಡಲಾಗುವುದು.

**ಬಿ.ಜಿ. ಜ್ಯೋತಿ ಪ್ರಕಾಶ್ ಮಿರ್ಜಿ**
ಅಪರ ಪೊಲೀಸ್ ಆಯುಕ್ತರು, (ಆಡಳಿತ) ಹಾಗೂ
ಪಿ.ಆರ್. 722 (ಟೆಂಡರ್ ಆಹ್ವಾನಿಸುವ ಮತ್ತು ತೆರೆಯುವ ಪ್ರಾಧಿಕಾರ)
ಬೆಂಗಳೂರು ನಗರ.

## ಕೃಷಿ ಇಲಾಖೆ

## ಕೃಷಿ ಆಯುಕ್ತರ ಕಾರ್ಯಾಲಯ ಶೇಷಾದ್ರಿ ರಸ್ತೆ, ಬೆಂಗಳೂರು-1

### ಟೆಂಡರ್-ಕಂ-ಬಹಿರಂಗ ಹರಾಜು ಪ್ರಕಟಣೆ

**ಸಂಖ್ಯೆ: ಸಾಮಾನ್ಯ:ವಾಹನ:ವಿಲೇವಾರಿ:32:MYP8599:2007-08, ದಿನಾಂಕ: 23ನೇ ನವೆಂಬರ್ 2007**

**ವಿಷಯ:** ಕೃಷಿ ನಿರ್ದೇಶನಾಲಯದ ವಾಹನ ಸಂಖ್ಯೆ ಎಂವೈಪಿ 8599 ಅಂಬಾಸಿಡರ್ ಕಾರನ್ನು ಟೆಂಡರ್-ಕಂ-ಬಹಿರಂಗ ಹರಾಜಿನ ಮೂಲಕ ವಿಲೇವಾರಿ ಮಾಡುವ ಬಗ್ಗೆ.

ಈ ಮೂಲಕ ಸಾರ್ವಜನಿಕರಿಗೆ ತಿಳಿಯಪಡಿಸುವುದೇನೆಂದರೆ, ಕೃಷಿ ನಿರ್ದೇಶಕರು, ಶೇಷಾದ್ರಿ ರಸ್ತೆ, ಬೆಂಗಳೂರು-1 ರವರ ಕಛೇರಿಯ ವಾಹನ ಸಂಖ್ಯೆ: ಎಂವೈಪಿ 8599 ಅಂಬಾಸಿಡರ್ ಕಾರನ್ನು ಟೆಂಡರ್-ಕಂ-ಬಹಿರಂಗ ಹರಾಜಿನ ಮೂಲಕ ಕೃಷಿ ನಿರ್ದೇಶನಾಲಯದ ಆವರಣದಲ್ಲಿ ವಾಹನವು ಯಾವ ಸ್ಥಿತಿಯಲ್ಲಿ ಇದೆಯೋ ಅದೇ ಸ್ಥಿತಿಯಲ್ಲಿ ವಿಲೇವಾರಿ ಮಾಡಲಾಗುವುದು. ಇಚ್ಛೆಯುಳ್ಳ ಸಾರ್ವಜನಿಕರು ಈ ಟೆಂಡರ್-ಕಂ-ಬಹಿರಂಗ ಹರಾಜಿನಲ್ಲಿ ಭಾಗವಹಿಸಬಹುದು.

| ವಾಹನ ಸಂಖ್ಯೆ ಮಾದರಿ | ವಿಕ್ರಯದ ಮಾದರಿ | ಟೆಂಡರ್‌ಗಳನ್ನು ಸ್ವೀಕರಿಸುವ ಸ್ಥಳ | ಟೆಂಡರ್ ಸ್ವೀಕರಿಸುವ ಕೊನೆಯ ದಿನಾಂಕ | ಹರಾಜಿನ ದಿನಾಂಕ ಮತ್ತು ವೇಳೆ | ಇ.ಎಂ.ಡಿ. ಠೇವಣಿ | ಬಹಿರಂಗ ಹರಾಜು ಮಾಡುವ ಸ್ಥಳ |
|---|---|---|---|---|---|---|
| MYP 8599 ಪೆಟ್ರೋಲ್ ಕಾರ್ (1979) | ಟೆಂಡರ್-ಕಂ-ಬಹಿರಂಗ ಹರಾಜು | ಆಡಳಿತ ಸಹಾಯಕರು ಸಾಮಾನ್ಯ ವಿಭಾಗ, ಕೇಂದ್ರ ಕಛೇರಿ ಕೃಷಿ ನಿರ್ದೇಶನಾಲಯ, ಶೇಷಾದ್ರಿರಸ್ತೆ, ಬೆಂಗಳೂರು | 10.01.2008 ಮಧ್ಯಾಹ್ನ 5.00 ಗಂಟೆವರೆಗೆ | 11.01.2008 ಅಪರಾಹ್ನ 3.00 ಗಂಟೆಗೆ | ರೂ. 5,000-00 (ಐದು ಸಾವಿರ) ಡಿ.ಡಿ. ಕೃಷಿ ನಿರ್ದೇಶಕರ ಪದನಾಮದಲ್ಲಿ | ಕೃಷಿ ನಿರ್ದೇಶನಾಲಯದ ಆವರಣ ಶೇಷಾದ್ರಿರಸ್ತೆ, ಬೆಂಗಳೂರು. |

**ಷರತ್ತುಗಳು:**

1. ವಾಹನಕ್ಕೆ ಟೆಂಡರ್ ಸಲ್ಲಿಸುವವರು ಬಿಳಿಯ ಹಾಳೆಯಲ್ಲಿ ಗರಿಷ್ಠ ಮೊತ್ತವನ್ನು ಅಂಕಿಗಳಲ್ಲಿ ಮತ್ತು ಅಕ್ಷರಗಳಲ್ಲಿ ನಮೂದಿಸಿ ರೂ.5,000-00 ಗಳ ಕ್ರಾಸ್ ಮಾಡಿದ ಡಿ.ಡಿ.ಯನ್ನು ಲಗತ್ತಿಸಿ ಮೊಹರು ಮಾಡಿದ ಲಕೋಟೆಯಲ್ಲಿಟ್ಟು ಲಕೋಟೆಯ ಮೇಲೆ ವಾಹನದ ನಂಬರನ್ನು ದಪ್ಪ ಅಕ್ಷರದಲ್ಲಿ ನಮೂದಿಸುವುದು ಮತ್ತು ಟೆಂಡರ್‌ದಾರರ ವಿಳಾಸವನ್ನು ಸ್ಪಷ್ಟವಾಗಿ ಬರೆದು ಸಲ್ಲಿಸಬೇಕು. ಡಿ.ಡಿ. ಇಲ್ಲದಿರುವ ಟೆಂಡರನ್ನು ಮಾನ್ಯ ಮಾಡಲಾಗುವುದಿಲ್ಲ.
2. ದಿನಾಂಕ: 11.01.2008 ರಂದು ಬಹಿರಂಗ ಹರಾಜು ಪ್ರಕ್ರಿಯೆ ಮುಕ್ತಾಯವಾದ ನಂತರ ಟೆಂಡರ್ ಲಕೋಟೆಗಳನ್ನು ಬಿಡ್‌ದಾರರ ಹಾಗೂ ಟೆಂಡರುದಾರರ ಸಮ್ಮುಖದಲ್ಲಿ ತೆರೆಯಲಾಗುವುದು. ಅಖೈರು ಬಿಡ್ಡು ಅಥವಾ ಟೆಂಡರ್ ಮೊಬಲಗು ಇವುಗಳಲ್ಲಿ ಗರಿಷ್ಠ ಮೊತ್ತವನ್ನು ಅಂಗೀಕರಿಸಲಾಗುವುದು.

3. ಹರಾಜಿನಲ್ಲಿ ಭಾಗವಹಿಸುವವರು ರೂ. 5,000/- (ರೂ.ಐದು ಸಾವಿರ) ಮಾತ್ರ ಠೇವಣಿ ಇಟ್ಟು ಹರಾಜಿನಲ್ಲಿ ಭಾಗವಹಿಸುವುದು.
4. ಟೆಂಡರ್ ಹಾಕಿರುವವರು ಸಹ ಬಹಿರಂಗ ಹರಾಜಿನಲ್ಲಿ ಭಾಗವಹಿಸಲು ಇಚ್ಛಿಸಿದಲ್ಲಿ ರೂ. 5,000/- ಠೇವಣಿ ಇಟ್ಟು ಹರಾಜಿನಲ್ಲಿ ಭಾಗವಹಿಸಬಹುದು.
5. ಯಶಸ್ವಿ ಬಿಡ್ಡುದಾರರು/ಟೆಂಡರ್‌ದಾರರು ಠೇವಣಿ ಮೊಬಲಗು ಹೊರತುಪಡಿಸಿ ಗರಿಷ್ಟ ಬಿಡ್ಡ್ / ಟೆಂಡರ್ ಮೊತ್ತದ ಶೇ 25 ರಷ್ಟು ಮೊಬಲಗು ಸ್ಥಳದಲ್ಲಿಯೇ ಪಾವತಿಸಬೇಕು. ತಪ್ಪಿದಲ್ಲಿ ಅವರು ನೀಡಿರುವ ಠೇವಣಿ ಹಣವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಾಗುವುದು. ಟೆಂಡರ್ ಹರಾಜನ್ನು ಸಂಬಂಧಿಸಿದ ಅಧಿಕಾರಿಯು ಅನುಮೋದಿಸಿದ ನಂತರ ಬಾಕಿ ಮೊತ್ತವನ್ನು ಮತ್ತು ನಿಯಮಾನುಸಾರ ತೆರಿಗೆಯನ್ನು ಈ ಕಛೇರಿಯ ತಿಳುವಳಿಕೆ ಪತ್ರ ಸ್ವೀಕರಿಸಿದ 10 ದಿನದೊಳಗೆ ಪಾವತಿಸಿ ತಮ್ಮ ಸ್ವಂತ ಜವಾಬ್ದಾರಿಯ ಮೇಲೆ ವಾಹನವನ್ನು ತೆಗೆದುಕೊಂಡು ಹೋಗತಕ್ಕದ್ದು. ತಪ್ಪಿದಲ್ಲಿ ಅವರು ಪಾವತಿಸಿದ ಒಟ್ಟು ಮೊತ್ತವನ್ನು ಮುಟ್ಟುಗೋಲು ಹಾಕಿಕೊಳ್ಳಲಾಗುವುದು ಹಾಗೂ ಆ ಬಗ್ಗೆ ಯಾವುದೇ ಹಕ್ಕು ಅವರಿಗೆ ಇರುವುದಿಲ್ಲ.
6. ಯಶಸ್ವಿ ಬಿಡ್ಡ್ : ಟೆಂಡರುದಾರರು ತಮ್ಮ ಖರ್ಚಿನಲ್ಲಿ ವಾಹನದ ಮಾಲೀಕತ್ವ ಬದಲಾವಣೆ ಮಾಡಿಕೊಳ್ಳತಕ್ಕದ್ದು.
7. ಯಶಸ್ವಿ ಬಿಡ್ಡ್ : ಟೆಂಡರುದಾರರು ಹೊರತುಪಡಿಸಿ ಉಳಿದವರಿಗೆ ಠೇವಣಿ ಹಣ : ಡಿ.ಡಿ.ಯನ್ನು ಹರಾಜು ಪ್ರಕ್ರಿಯೆ ಮುಕ್ತಾಯವಾದ ನಂತರ ಅವರಿಂದ ಲಿಖಿತ ಬೇಡಿಕೆ ನೀಡಿದ ತರುವಾಯ ಹಿಂದಿರುಗಿಸಲಾಗುವುದು.
8. ಹರಾಜು ಕೈಗೊಳ್ಳುವ / ರದ್ದು ಪಡಿಸುವ / ಮುಂದೂಡುವ ಹಾಗೂ ಬಿಡ್ ಅಂಗೀಕರಿಸುವ ಮತ್ತು ತಿರಸ್ಕರಿಸುವ ಹಕ್ಕು ಕಾಯ್ದಿರಿಸಲಾಗಿದೆ.
9. ಎಲ್ಲಾ ವಿಷಯಗಳಲ್ಲಿ ಕೃಷಿ ನಿರ್ದೇಶಕರು, ಶೇಷಾದ್ರಿ ರಸ್ತೆ, ಬೆಂಗಳೂರು ಇವರ ತೀರ್ಮಾನವೇ ಅಂತಿಮವಾಗಿರುತ್ತದೆ. ಈ ತೀರ್ಮಾನಕ್ಕೆ ಎಲ್ಲಾ ಬಿಡ್ಡ್‌ದಾರರು/ ಟೆಂಡರ್‌ದಾರರು ಬದ್ಧರಾಗಿರಬೇಕಾಗಿರುತ್ತದೆ.
10. ವಾಹನವನ್ನು ಈಗ ಇದ್ದ ಪರಿಸ್ಥಿತಿಯಲ್ಲಿಯೇ ಹರಾಜು ಮಾಡಲಾಗುವುದು. ವಾಹನವನ್ನು ಕಛೇರಿ ಕೆಲಸದ ದಿನಗಳಲ್ಲಿ ಕಛೇರಿ ವೇಳೆಯಲ್ಲಿ ವೀಕ್ಷಿಸಬಹುದು.

ಪಿ.ಆರ್. 725 ಕೃಷಿ ನಿರ್ದೇಶಕರ ಪರವಾಗಿ

**OFFICE OF THE EXECUTIVE ENGINEER P.W.D. CHICKABALLAPUR DIVISION, CHICKABALLAPUR**
**TENDER NOTIFICATION No.09/2007-08, Dated: 13th November 2007**
**TENDER NOTIFICATION 1st Call (In two cover system)**

Sealed Item Rate tenders for the works noted below under TWO COVER BID SYSTEM as per the Karnataka Transparency in public procurement act-2000 in prescribed forms in duplicate is invited from class-1 contractors registered in K.P.W.D/MORT&H approved firms. Two Cover bid system of tendering consists of Technical Bid and Financial Bid. These two covers shall be sealed and kept in another sealed cover duly super subscribing name of the cover and shall be addressed to the under signed with name and full postal address of the bidder. Completed bids will be received in the office of The Chief Engineer, C&B (S), Bangalore-1, Office of the Superintending Engineer PWD Bangalore circle, Bangalore-9 & O/o The Executive Engineer, PWD Chickaballapur Division, Chickaballapur up to 4.00 PM on 24.01.2008 and Technical Bids will be opened in the office of the under signed in presence of Bidders or Authorised representative on 25.01.2008 at 4.00 PM. The contractors who are qualified in technical bids their financial bids opening date will be intimated. The subject of conditions laid down in the form PWG.65, 66 of KPWD code Vol. II, special conditions contained in the schedules and in Karnataka Transparency in Public Procurement act 2000.

| Sl. No. | Name of Work | Approx. Amount put to tender in Lakhs | E.M.D to be paid |
|---|---|---|---|
| 1. | Improvements to Dibburahally - Thimmasandra road from ch: 13.00 to 15.70 km in Sidlaghatta taluk. | 59.49 | 59500.00 |

| | | |
|---|---|---|
| A. | Last Date of receipt of application for issue of tender forms 10.00 AM to 5.30 PM. | 31.12.2007 to 21.01.2008 |
| B. | Last Date for issue of tender forms Morning 10.00 AM to evening 5.30 PM. | 31.12.2007 to 21.01.2008 |
| C. | Last Date of submission of sealed tenders forms Morning 10.00 AM to evening 4.00 PM. | 24.01.2008 |

| | | |
|---|---|---|
| D. | Cost of tender form per set (not refundable & Transferable) to be paid in cash or DD. | Rs.10000 + Other Taxes |
| E. | Class of Registration of Contractors eligible to Tender. | Class-I |
| F. | Time limit for completion of work including Monsoon. | 8 Months. |

**GENERAL CONDITIONS:**

1. The Contractors interested in bidding for the works may submit an application to the under signed along with cost of tender documents (non refundable) to be paid in cash or in the form of DD drawn in favour The Executive Engineer, PWD Kolar Division, Kolar, payable at Kolar along with the application. The applicant should submit proof of registration, relevant experience certificate issued by the Officer not below the rank of Executive Engineer while submitting the application for Tender Schedules, otherwise the application may not be considered.

**CONDITIONS FOR TECHNICAL BIDS:**

1. The E.M.D. in the form of D.D./F.D.R. / Pay Order /Bank Guarantee drawn from a Nationalized Bank or Scheduled Banks or NSC (Pledged in favour of the under signed) to be enclosed with the Technical Bid. The Bank Guarantee shall be in the prescribed form other wise tenders will be rejected all types of EMD should be valid for 180 Days from the date of opening fixed for the Tender other wise such tenders will be rejected.
2. Each Tender should have individually satisfactorily completed works of single similar nature of road work (By using Hot Mix plant 40/60 TPH & Paver Finisher) of value not less than 30% of the value of work in this notification (Updated at 10% per annum compoundable) in any one financial year during a block period of previous five years. The experience certificate in this regard should invariably have mention of nature / item of work executed, along with date of commencement and date of completion by the competent authority not below the rank of Executive Engineer, otherwise the technical bid is liable for disqualification. **(For Road works)**
3. For proof of Financial capacity Line of credit from any Scheduled Bank shall be invariably produced for the particular work in the proforma prescribed in the technical bid for an amount equal to 30% of amount put to tender. Failure to submit the line of credit along with Technical bid lead to disqualification.
4. All documents enclosed in support of Technical Bids shall be attested by the Notary / Gazetted Officer other wise the bids are liable for disqualification. The original documents should be produced for verification at any stage of tender process as and when sought for. Failure to produce original documents leads to disqualification of technical bids.
5. Only relevant certificates and details shall be furnished with the technical bids. Details of company / Agencies / Firms profile be enclosed.
6. Tendering by joint venture is not allowed.
7. The Competent authority reserves the right to reject any or all tenders without assigning any reasons.
8. The intending Tenderer should produce contractors registration passbook invariably at the time of purchasing blank tender forms otherwise blank tender's forms will not be issued.
9. Tender validity period for this works is 90 Days from the date of opening of the Tenders.
10. Conditional tenders will not be accepted.
11. All documents enclosed as above shall be page numbered and index shall also be enclosed.
12. If any dates mentioned above happens to be General Holiday, the next working day will hold good in lieu of the date mentioned.

**Any further details can be had from the Division Office on all working days during office hours.**

Executive Engineer,
P.W.D. Chickaballapur Division,
Chickaballapur.

P.R. 726

**ಅರಣ್ಯ ಇಲಾಖೆ**

**ಅರಣ್ಯ ಸಂರಕ್ಷಣಾಧಿಕಾರಿಗಳ ಕಛೇರಿ, ಶಿವಮೊಗ್ಗ ವೃತ್ತ, ಶಿವಮೊಗ್ಗ**

**ಸಂಖ್ಯೆ:ಬಿ5–ಬಿಯುಡಿ–ಮುತಂ–ಸಿಆರ್–40/07–08, ದಿನಾಂಕ:26ನೇ ನವೆಂಬರ್ 2007.**

**ಸಂಕ್ಷಿಪ್ತ ಟೆಂಡರು ಪ್ರಕಟಣೆ**

**ವಿಷಯ:** 2007–08ನೇ ಸಾಲಿಗೆ ಮುಳ್ಳುತಂತಿ ಪೂರೈಸುವ ಕುರಿತು ದರ ನಿಗದಿ ಬಗ್ಗೆ.

**ಉಲ್ಲೇಖ:** ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿಗಳು, ಬೆಂಗಳೂರುರವರ ಪತ್ರ ಸಂಖ್ಯೆ:ಪಿಸಿಸಿಎಫ್–ಸಿಸಿಆರ್–ಮುತಂ/31/06–07 ದಿ:15–6–2007.

ಶಿವಮೊಗ್ಗ ಅರಣ್ಯ ವೃತ್ತ ವ್ಯಾಪ್ತಿಯಲ್ಲಿ ಬರುವ ವಿಭಾಗಗಳಲ್ಲಿ 2007–08ನೇ ಸಾಲಿನ ಅರಣ್ಯೀಕರಣ ಕಾರ್ಯಕ್ರಮಗಳಿಗೆ ಸಂಬಂಧಿಸಿದಂತೆ ನೆಡುತೋಪು ಮತ್ತಿತರ ಅರಣ್ಯ ಪ್ರದೇಶಗಳಲ್ಲಿ ರಕ್ಷಣಾ ಬೇಲಿ ಮಾಡುವ ಉದ್ದೇಶದಿಂದ (1) 12 x 14 ಗೇಜಿನ Tata Special Hot Dipped G.I. Barbed wire (2) 14 Guage Plain Wire ಮುಳ್ಳುತಂತಿ ಪೂರೈಸಲು ಅಧಿಕೃತ ಉತ್ಪಾದಕರಿಂದ ಟೆಂಡರನ್ನು ಎರಡು ಲಕೋಟೆಯ ಪದ್ಧತಿಯಲ್ಲಿ (Two covers system) ಶಿವಮೊಗ್ಗ ವೃತ್ತದ ಯಾವುದೇ ವಿಭಾಗದಲ್ಲಿ ನೊಂದಾಯಿಸಿದ ಗುತ್ತಿಗೆದಾರರಿಂದ ಕರ್ನಾಟಕ ಪಾರದರ್ಶಕ ಅಧಿನಿಯಮ 1999ರ ಅನುಗುಣವಾಗಿ ಆಹ್ವಾನಿಸಲಾಗಿದೆ.

ಟೆಂಡರುದಾರರು ಒಂದನೇ ಲಕೋಟೆಯ ಮೇಲೆ ತಾಂತ್ರಿಕ ಬಿಡ್ (Technical Bid) ಎಂದು ನಮೂದಿಸಿ ಆ ಲಕೋಟೆಯ ಒಳಗೆ ಸರಬರಾಜು ಕುರಿತಾದ ತಾಂತ್ರಿಕ ಗುಣಮಟ್ಟ, ಅವರು ಪಡೆದುಕೊಳ್ಳುವ ಕಚ್ಚಾ ಸಾಮಗ್ರಿ ಪೂರೈಕೆ ವಿವರ, ತಯಾರಿಕಾ ಘಟಕ ಹೊಂದಿರುವ ದಾಖಲೆ ಪತ್ರ, ಘಟಕ ಸ್ಥಾಪಿಸಲಾದ ಸ್ಥಳದ ವಿಳಾಸ ಮತ್ತು ಇಚ್ಛಿಸುವ ಯಾವುದೇ ಮಾಹಿತಿ ವಿವರವನ್ನು ಒಂದನೇ ಲಕೋಟೆಯಲ್ಲಿ ಒಪ್ಪಿಸಬೇಕು. ಎರಡನೇ ಲಕೋಟೆಯ ಮೇಲೆ ಆರ್ಥಿಕ ಬಿಡ್ (Financial Bid) ಎಂದು ಬರೆದು ಅವರು ಸರಬರಾಜು ಮಾಡುವ ಅಂತಿಮ ತಯಾರಿಕಾ ಸಾಮಗ್ರಿಯ ಪ್ರತಿ ಟನ್ ದರಗಳನ್ನು ಅಕ್ಷರ ಮತ್ತು ಸಂಖ್ಯೆಯ ಎರಡರಲ್ಲೂ ನಮೂದಿಸಬೇಕು. ಹಾಗೂ ಎರಡೂ ಟೆಂಡರುಗಳನ್ನು ದಿನಾಂಕ:26–12–2007 ರಂದು ಮಧ್ಯಾಹ್ನ 3.00 ಗಂಟೆಯ ಒಳಗಾಗಿ ಈ ಕಛೇರಿಯಲ್ಲಿ ಇಟ್ಟಿರುವ ಪ್ರತ್ಯೇಕ ಟೆಂಡರು ಬಾಕ್ಸ್‌ನಲ್ಲಿ ಹಾಕತಕ್ಕದ್ದು.

ಸದರಿ ತಾಂತ್ರಿಕ ಬಿಡ್ (Technical Bid) ಲಕೋಟೆಗಳನ್ನು ಇಚ್ಛಿತ ಮುಳ್ಳುತಂತಿ ತಯಾರಕರ ಸಮಕ್ಷಮದಲ್ಲಿ ತೆರೆದು ಟೆಂಡರುದಾರರು ಮಂಡಿಸುವ ತಾಂತ್ರಿಕ ವಿವರಗಳನ್ನು ಆಧರಿಸಿ Short list ಮಾಡಿ ತಾಂತ್ರಿಕವಾಗಿ ಅರ್ಹರಾದ ಟೆಂಡರುದಾರರನ್ನು ಆಯ್ಕೆ ಮಾಡಲಾಗುವುದು ಹಾಗೂ ಈ ಪಟ್ಟಿಯನ್ನು ಅಂದೇ ಪ್ರಕಟಿಸಲಾಗುವುದು.

ತಾಂತ್ರಿಕವಾಗಿ ಅರ್ಹರಾದ ಟೆಂಡರುದಾರರ ಆರ್ಥಿಕ ಬಿಡ್ (Financial Bid) ಲಕೋಟೆಯನ್ನು ದಿನಾಂಕ: 27.12.2007 ರಂದು ಬೆಳಿಗ್ಗೆ 11.00 ಗಂಟೆಗೆ ಈ ಬಗ್ಗೆ ರಚಿಸಲಾದ ತಾಂತ್ರಿಕ ಸಮಿತಿಯ ಅಧಿಕಾರಿಗಳ ಮತ್ತು ಟೆಂಡರುದಾರರ ಸಮಕ್ಷಮದಲ್ಲಿ ಈ ಕೆಳಸಹಿದಾರರು ಅಥವಾ ಅವರಿಂದ ಅಧಿಕೃತವಾಗಿ ನೇಮಿಸಲ್ಪಟ್ಟ ಅಧಿಕಾರಿಗಳಿಂದ ತೆರೆಯಲಾಗುವುದು.

**ಷೆಡ್ಯೂಲ್**

| ಕ್ರ ಸಂ | ಯೂನಿಟ್ ನಂ. | ಸಾಮಗ್ರಿ ವಿವರ | ಅಂದಾಜು ಪ್ರಮಾಣ (ಟನ್) | ಅಂದಾಜು ಮೊತ್ತ (ಲಕ್ಷ ರೂ.) | ಇ.ಎಂ.ಡಿ. ಮೊತ್ತ (ರೂ) |
|---|---|---|---|---|---|
| 1. | (1) ಶಿವಮೊಗ್ಗ ಅರಣ್ಯ ವಿಭಾಗ | 12x 14 Guage Tata Special Hot Dipped G.I. Barbed wire Medium coated with Zinc (30 Gms coated) | 50.00 | 30.00 | 60,000/- |
| 2. | (2) ಭದ್ರಾವತಿ ಅರಣ್ಯ ವಿಭಾಗ | 12 x 14 Guage Tata Special Hot Dipped G.I. Barbed wire Medium coated with Zinc (30 Gms coated) | 5.00 | 3.00 | 6,000/- |
| 3. | (1) ಸಾಗರ ಅರಣ್ಯ ವಿಭಾಗ | 12 x 14 Guage Tata Special Hot Dipped G.I. Barbed wire Medium coated with Zinc (30 Gms coated) | 25.00 | 15.00 | 50,000/- |
| | | 14 Guage Tata Special Hot Dipped Zinc loated Plain wire | 0.5 | 0.30 | 600/- |

ನಿಬಂಧನೆಗಳು:–

1. ಪ್ರತಿ ಯುನಿಟ್‌ಗೆ ಆರ್ಥಿಕ ಪ್ರತ್ಯೇಕ ಟೆಂಡರು ಫಾರಂನ್ನು ರೂ.1000.00 ಮತ್ತು ತೆರಿಗೆ ಪಾವತಿ ಮಾಡಿ ದಿ:27.12.2007 ರ ಮಧ್ಯಾಹ್ನ 1.00 ಗಂಟೆಯ ಒಳಗಾಗಿ ಈ ಕಛೇರಿಯಲ್ಲಿ ಪಡೆಯಬಹುದು.
2. ದರವನ್ನು ಎಲ್ಲಾ ತೆರಿಗೆಗಳು ಸೇರಿ ಟನ್ ಒಂದಕ್ಕೆ ಮುಳ್ಳುತಂತಿ ಮತ್ತು ಸಾದಾ ತಂತಿಗೆ ಪ್ರತ್ಯೇಕವಾಗಿ ಒಂದು ಘಟಕಕ್ಕೆ ಒಂದೇ ಟೆಂಡರನ್ನು ಮಾತ್ರ ಎಷ್ಟು ಎಂದು ನಮೂದಿಸತಕ್ಕದ್ದು.
3. ಬೇಡಿಕೆ ಪಟ್ಟಿಗಳನ್ನು ಆಯಾ ಯೂನಿಟ್ಟಿನ ಉಪ ಅರಣ್ಯ ಸಂರಕ್ಷಣಾಧಿಕಾರಿಗಳು ನೀಡುವುದು. ಮುಳ್ಳುತಂತಿಯನ್ನು ಶಿವಮೊಗ್ಗ ಅರಣ್ಯ ವೃತ್ತ ವ್ಯಾಪ್ತಿಯಲ್ಲಿ ಇರುವ ಸೂಚಿಸಿದ ಸ್ಥಳಕ್ಕೆ ಸರಬರಾಜು ಮಾಡಬೇಕಾಗಿರುತ್ತದೆ. ನೀಡಿರುವ ದರಗಳಲ್ಲಿ ಈ ಅಂಶ ಒಳಗೊಂಡಿರತಕ್ಕದ್ದು.

4. ಟೆಂಡರುದಾರರು ಇ.ಎಂ.ಡಿ ಮೊತ್ತವನ್ನು ರಾಷ್ಟ್ರೀಕೃತ ಬ್ಯಾಂಕಿನ ಡಿ.ಡಿ.ಯನ್ನು ಉಪ ಅರಣ್ಯ ಸಂರಕ್ಷಣಾಧಿಕಾರಿ, ಶಿವಮೊಗ್ಗ ವಿಭಾಗ, ಶಿವಮೊಗ್ಗ ಇವರ ಹೆಸರಿನಲ್ಲಿ ತೆಗೆದು ತಾಂತ್ರಿಕ ಬಿಡ್ ಲಕೋಟೆಯ ಒಳಗೆ ಇ.ಎಂ.ಡಿ. ಲಗತ್ತಿಸಬೇಕು. ಇ.ಎಂ.ಡಿ. ಲಗತ್ತು ಇಲ್ಲದ ಟೆಂಡರು ತಿರಸ್ಕೃತವಾಗುವುದು.
5. ಷೆಡ್ಯೂಲ್ ನಲ್ಲಿ ನಮೂದಿಸಿರುವ ಪ್ರಮಾಣವು ಅಂದಾಜು ಆಗಿದ್ದು ಹೆಚ್ಚು ಅಥವಾ ಕಡಿಮೆ ಆಗಬಹುದು. ಹಾಗೂ ಸಾಮಗ್ರಿಗಳಿಗೆ ಆಯಾ ಶೀರ್ಷಿಕೆಗಳಡಿ ಬಿಡುಗಡೆಯಾಗುವ ಅನುದಾನದ ಮಿತಿಯಲ್ಲಿ ಹಣ ಪಾವತಿಸಲಾಗುವುದು.
6. ಸಾಮಗ್ರಿಗಳ ಸರಬರಾಜು ಬಗ್ಗೆ ತಾಂತ್ರಿಕ ಬಿಡ್ (Technical Bid) ನಲ್ಲಿ ಷರತ್ತುಗಳಿಗೆ (Pre–Qualification) ಅರ್ಹವಿರುವ ಟೆಂಡರುದಾರರ ಆರ್ಥಿಕ ಬಿಡ್ಡನ್ನು (Financial Bid) ಮಾತ್ರ ತೆರೆಯಲಾಗುವುದು.
7. ಹೆಚ್ಚಿನ ಮಾಹಿತಿಯನ್ನು ಈ ಕಛೇರಿಯ ಕೆಲಸದ ವೇಳೆಯಲ್ಲಿ ಪಡೆದುಕೊಳ್ಳಬಹುದು.
8. ಟೆಂಡರಿನಲ್ಲಿ ನಮೂದಿಸಿದ ಮುಳ್ಳುತಂತಿಯನ್ನು ದಿ:10–3–2008ರ ಒಳಗೆ ಸರಬರಾಜು ಮಾಡಿ ಮುಗಿಸಬೇಕು.
9. ಯಾವುದೇ ಕಾರಣಗಳನ್ನು ನೀಡದೆ ಟೆಂಡರನ್ನು ಅಂಗೀಕರಿಸುವ ಅಥವಾ ತಿರಸ್ಕರಿಸುವ ಅಧಿಕಾರವನ್ನು ಅರಣ್ಯ ಸಂರಕ್ಷಣಾಧಿಕಾರಿಗಳು ಹೊಂದಿರುತ್ತಾರೆ.
10. ಅರಣ್ಯ ಇಲಾಖೆಯನ್ನು ಒಳಗೊಂಡಂತೆ, ಯಾವುದೇ ಸರ್ಕಾರಿ ಇಲಾಖೆಯಲ್ಲಿ ಕಪ್ಪು ಪಟ್ಟಿಗೆ ಸೇರಿದ ಟೆಂಡರುದಾರರು ಈ ಟೆಂಡರಿನಲ್ಲಿ ಭಾಗವಹಿಸುವಂತಿಲ್ಲ.
11. ಯಾವುದೇ ಕಾರಣಗಳಿಂದ ಟೆಂಡರು ವಿಫಲವಾದಲ್ಲಿ ಪುನ: ಎರಡನೇ ಬಾರಿ ಮೇಲಿನಂತೆ 2 ಲಕೋಟೆ ಪದ್ಧತಿಯಲ್ಲಿ ಮರುಟೆಂಡರನ್ನು ದಿ:29–12–2007 ಮತ್ತು ಮೂರನೆಯ ಬಾರಿ ದಿ:4–1–2008 ರಂದು ಮಧ್ಯಾಹ್ನ 3.00 ಗಂಟೆಯವರೆಗೆ ಸ್ವೀಕರಿಸಲಾಗುವುದು. ತಾಂತ್ರಿಕ ಬಿಡ್ ಲಕೋಟೆಗಳನ್ನು ಅದೇ ದಿನ 5.00 ಗಂಟೆಯ ಒಳಗೆ ತೆರೆಯಲಾಗುವುದು ಹಾಗೂ ಇದಕ್ಕೆ ಸಂಬಂಧಿಸಿದ ಅರ್ಹ ಆರ್ಥಿಕ ಬಿಡ್ ಲಕೋಟೆಗಳನ್ನು ದಿನಾಂಕ:2–1–2008, 5–1–2008 ರಂದು ಪೂರ್ವಾಹ್ನ 11.00 ಗಂಟೆಗೆ ತೆರೆಯಲಾಗುವುದು.

ಅರಣ್ಯ ಸಂರಕ್ಷಣಾಧಿಕಾರಿ,
ಶಿವಮೊಗ್ಗ ವೃತ್ತ, ಶಿವಮೊಗ್ಗ.

ಪಿ.ಆರ್. 752

**PANCHAYATH RAJ ENGINEERING DEPARTMENT**

**PANCHAYATH RAJ ENGINEERING DIVISION, MANDYA.**

**No: EE : PRED:MDY: NIT :AE-1/2007-2008 4294 Dated: 21st November 2007**

**No.28/2007-08**

**SHORT TERM TENDER NOTIFICATION (2nd CALL)**

**(Only through E-tendering system)**

**(TWO COVER SYSTEM)**

Tenders are invited through Electronic tendering system (e-tender) for the following works by the Executive Engineer, Panchayath Raj Engineering Division, Mandya, on behalf of the Governor of Karnataka state from the Eligible and qualified Class-I Contractors of Government of Karnataka or Contractors registered with other State Government undertakings and water supply board as per the PWD Code Part-II according to the conditions of PWG.65 & 66 for the work mentioned in the table given below:

The Project includes construction of OHT, Intake well, connecting pipeline, Jack well, supplying and erection of pumping Machinery, supplying and laying of M.S. Raising main, Treatment units such as Balancing tank, settling tank, Rapid/Slow sand filters, transmission mains, supplying and laying of PVC & GI pipes and construction of intermediate sumps and pump house etc., as per sanctioned estimate items including testing of all installations and commissioning of the project.

| | | |
|---|---|---|
| Period for receiving requisition for blank tender documents | : | 01/12/2007 to 20/12/2007 up to 5.30 P.M. |
| Issue of blank tender documents | : | 22/12/2007 to 24/12/2007 up to 5.30 P.M. |
| Receipt of completed tender documents (Technical & Financial bids both) | : | 27/12/2007 up to 4.00 P.M. |
| Opening Technical bid | : | 28/12/2007 At 3.00 P.M. |
| Opening Financial bid | : | 29/12/2007 At 12.00 Noon. (In case of holidays, tender will be opened on next day). |

| Sl. No. | Name of the work | Approx cost put to tender Rs. in Lakhs | EMD in Rs. | Cost of tender form in Rs. | Time for completion | Class of contractor |
|---|---|---|---|---|---|---|
| 1. | Providing drinking water supply to Netkal and other 4 villages in Malavalli taluk under submission programme | 374.00 | 374000/- | 15000/- | 12 Months | Class-I |
| 2. | Providing drinking water supply to K.Bellur and other 33 villages in Maddur taluk under submission programme | 476.00 | 476000/- | 15000/- | 12 Months | Class-I |

1. The tenderer should have executed and completed a single work of similar nature costing not less than 30% of the amount put to tender in the last five years. For which a copy of the certificate to that effect should be furnish at the time of submitting application for blank tender forms.
2. The tenders should be submitted in Section-I **<u>Technical Bid</u>** (Prequalification bid) and section - II **(Financial Bid)** through our website as per e-tendering systems.
3. A training programme on e-tendering will be conducted for the aspiring bidders / Contractors on 15/12/2007 at the office of the undersigned. Those who wish to undergo training should confirm through telephone with the undersigned. During the training, training manual and C.D. will be given to each contractor for participating through electronic tendering method. The Contractor should pay Rs. 750/- towards training charges.
4. During the training, User ID, Password and e-mail ID will be issued to the contractor only on presenting the Pass book (Contractors Registration Book) and entries will be made in the pass book at the time of registering for User ID & Password. If the contractor is unable to collect the User ID & Password in person, the same may be obtained through a representative with an authorization letter duly attesting his signature along with production of Pass book.
5. The blank tender documents (BOTH TECHNICAL & FINANCIAL BIDS) can be obtained through our website <u>http://www.pred.in/</u> by clicking on e-tendering which will link to <u>http://www.mytenderwizard.com/PRED</u> where electronic tender form is provided.
6. After the confirmation of payment, Bidders /Contractors can download e-tender form (tender document) by making payment of amount as shown in the above table towards the cost of documents through Demand Draft in favour of The Executive Engineer, Pachayath Raj Engineering division, Mandya.
7. Bidders / Contractors can access tender documents on the website, fill them and submit the completed tender document into electronic tender on the website itself. EMD shall be paid only in the form D.D./F.D.R. in favour Executive Engineer, Panchayath Raj Engineering division, Mandya. **<u>The scanned copy of the EMD shall be attached to the e-tender document, failing which the bid will not be considered.</u>** The original EMD document should be submitted to the Executive Engineer, Panchayath Raj Engineering division, Mandya along with technical bid, failing which the tenders will be rejected.
8. Bidders / Contractors should attach all the scanned copies of the certificates as required in Eligibility criteria.
9. Corrigendum / Addendum / Corrections, if any, will be published in the website.
10. If the total amount quoted by the Contractor for the above project works less than the amount put to tender (with respect to current S.R.) the contractor has to deposit the difference amount in the form of DD or FDR in favour of Executive Engineer, PRE Division, Mandya, at the time of approval of tender, Failing which the tender will be rejected.

11. The Executive Engineer, reserves the right to accept / reject any of all tenders without assigning any reasons.
12. Further details of works can be obtained from the office of the Executive Engineer, Panchayath Raj Engineering Division, Mandya on all working days. Any help regarding the participation in tendering can be had from the help desk Number: 080-2328431/13.

Executive Engineer,
P.R.E. Division, Mandya.

P.R. 753

ಅಡಿಷನಲ್ ಡೈರೆಕ್ಟರ್ ಜನರಲ್ ಆಫ್ ಪೊಲೀಸ್‌ರವರ ಕಛೇರಿ,
ಗುಪ್ತವಾರ್ತೆ, ನಂ.2, ನೃಪತುಂಗ ರಸ್ತೆ, ಬೆಂಗಳೂರು–1,
ಸಂಖ್ಯೆ:ಸಂಗ್ರಹ:ಆಧುನಿ/01/2007–08. ದಿನಾಂಕ: 30ನೇ ನವೆಂಬರ್ 2007.

ಟೆಂಡರ್ ಪ್ರಕಟಣೆ (ದ್ವಿ ಲಕೋಟೆ ಪದ್ಧತಿ)

ಪೊಲೀಸ್ ಇಲಾಖೆಗೆ ಅಗತ್ಯವಿರುವ ಈ ಕೆಳಕಂಡ ಉಪಕರಣ ಹಾಗೂ ಅದರ ಭಾಗಗಳನ್ನು ಸರಬರಾಜು ಮಾಡಲು ಮೊಹರು ಮಾಡಿರುವ ದರಪಟ್ಟಿಗಳನ್ನು (ಟೆಂಡರ್) "ದ್ವಿ ಲಕೋಟೆ ಪದ್ಧತಿ" ಯಲ್ಲಿ ಅಹ್ವಾನಿಸಲಾಗಿದೆ.

| Sl. No. | Particulars | Qty |
|---|---|---|
| 1. | Media center computer | 02 |
| 2. | RTVS | 01 |
| 3. | Hand Held Metal Detector (Protector) | 82 |
| 4. | Door Frame Metal Detector (Portable) | 53 |
| 5. | Deep Search Metal Detector | 06 |
| 6. | Dragon Lights | 36 |
| 7. | Extension Mirrors | 16 |
| 8. | Under Vehicle Search Mirrors | 09 |
| 9. | Night Vision Binoculars | 03 |
| 10. | Day Vision Binoculars | 15 |
| 11. | Prodder | 17 |
| 12. | Telephone circuit in series connection type small transmitter | 01 |
| 13. | GSM Spy Phone | 01 |
| 14. | Tissue Box Covered Wireless Surveillance System | 01 |
| 15. | Room Protector (De-bugging) | 05 |

**ಸೂಚನೆ:** ಮೇಲಿನ ಉಪಕರಣದ ಉತ್ಪಾದಕರು/ ಉತ್ಪಾದಕ ಘಟಕ / ಉತ್ಪಾದಕ ಘಟಕದ ಅಧಿಕೃತ ಏಜೆಂಟರುದಾರರು, ಪ್ರಖ್ಯಾತ ಕಂಪನಿಯ ಬ್ರಾಂಡ್‌ಗಳಿಗೆ ಆದ್ಯತೆ ನೀಡಲಾಗುವುದು.

1. ವಿವರ ಹಾಗೂ ಷರತ್ತನ್ನು ಒಳಗೊಂಡ ಟೆಂಡರ್ ಅರ್ಜಿಯನ್ನು ತಾಂತ್ರಿಕ ವಿಶಿಷ್ಟತೆಯೊಂದಿಗೆ (Technical Specifications) ದಿನಾಂಕ:10.12.2007 ರಿಂದ 10.01.2008 ರವರೆಗೆ ಕಛೇರಿಯ ಕೆಲಸದ ದಿನದಂದು ಬೆಳಿಗ್ಗೆ 10.00 ಗಂಟೆಯಿಂದ ಸಾಯಂಕಾಲ 5.00 ಗಂಟೆಯೊಳಗೆ ಈ ಕಛೇರಿಯಲ್ಲಿ ಪಡೆಯಬಹುದು. ಪ್ರತಿ ಟೆಂಡರ್ ಅರ್ಜಿಯ ಬೆಲೆ ರೂ. 200=00 ಅಗಿದ್ದು, ಇದನ್ನು ಮರು ಪಾವತಿ ಮಾಡಲಾಗುವುದಿಲ್ಲ. ಟೆಂಡರ್ ಅರ್ಜಿಯನ್ನು ನಗದು ಅಥವಾ ಡಿ.ಡಿ. ಮೂಲಕ ಮಾತ್ರ ಪಾವತಿಸಬಹುದಾಗಿದೆ. (ಮನಿಯಾರ್ಡರ್ ಮೂಲಕ ಪಾವತಿಸಿದರೆ ಅಂಗೀಕರಿಸುವುದಿಲ್ಲ) ಟೆಂಡರ್ ಅರ್ಜಿಯನ್ನು ಅಂಚೆ ಮೂಲಕ ಪಡೆಯ ಬಯಸುವವರು ರೂ. 200=00 ಗಳಿಗೆ ಡಿ.ಡಿ.ಯನ್ನು ಅಡಿಷನಲ್ ಡೈರೆಕ್ಟರ್ ಜನರಲ್ ಅಫ್ ಪೊಲೀಸ್, ಗುಪ್ತವಾರ್ತೆ, ನಂ.2, ನೃಪತುಂಗ ರಸ್ತೆ, ಬೆಂಗಳೂರು – 1. ರವರ ಹೆಸರಿನಲ್ಲಿ ಪಡೆದು ಕಳುಹಿಸಲು ಹಾಗೂ ಸ್ವವಿಳಾಸದೊಂದಿಗೆ ಲಕೋಟೆಯ ಮೇಲೆ ರೂ. 30=00 ಗಳ ಅಂಚೆ ಚೀಟಿಯನ್ನು ಅಂಟಿಸಿ ಕಳುಹಿಸಲು ಕೋರಿದೆ.
2. ಟೆಂಡರ್ ಅರ್ಜಿಯನ್ನು ಮೊಹರು ಮಾಡಿದ ಎರಡು ಪ್ರತ್ಯೇಕ ಕವರುಗಳಲ್ಲಿ ಈ ಕೆಳಕಂಡಂತೆ ಕಳುಹಿಸಬೇಕಾಗಿರುತ್ತದೆ.
ಅ) ಮೊಹರು ಮಾಡಿದ ಒಂದನೇ ಕವರಿನ ಮೇಲ್ಭಾಗದಲ್ಲಿ " **ಉಪಕರಣಗಳ ಸರಬರಾಜಿಗಾಗಿ ಇ.ಎಂ.ಡಿ. ಮತ್ತು ಇತರೆ ವಿವರಣೆ**" ಎಂದು ಹಾಗೂ ಕವರಿನ ಕೆಳಭಾಗದಲ್ಲಿ ಸರಬರಾಜು ಮಾಡುವ ಸಂಸ್ಥೆಯ ಹೆಸರು ಮತ್ತು ವಿಳಾಸವನ್ನು ನಮೂದಿಸಬೇಕು.
ಆ) ಮೊಹರು ಮಾಡಿದ ಎರಡನೇ ಕವರಿನ ಮೇಲ್ಭಾಗದಲ್ಲಿ " **ಉಪಕರಣಗಳ ಸರಬರಾಜು ಬೆಲೆ ಪಟ್ಟಿ**" ಎಂದು ಮತ್ತು ಕವರಿನ ಕೆಳಭಾಗದಲ್ಲಿ ಸರಬರಾಜು ಮಾಡುವ ಸಂಸ್ಥೆಯ ಹೆಸರು ಮತ್ತು ವಿಳಾಸವನ್ನು ನಮೂದಿಸಬೇಕು.
3. **ಮೊದಲನೆ ಕವರ್ (ಟೆಕ್ನಿಕಲ್ ಬಿಡ್) :–** ಮೊಹರು ಮಾಡಿದ ಮೊದಲನೆ ಕವರ ಈ ಕೆಳಕಂಡ ಮಾಹಿತಿಯನ್ನು ಒಳಗೊಂಡಿರಬೇಕು.

ಅ) ಸರಬರಾಜು ಮಾಡಲು ಇಚ್ಚಿಸುವ ಪ್ರತಿಯೊಂದು ಸಾಮಾಗ್ರಿಗಳಿಗೆ ಮುಂಗಡ ಹಣ ಠೇವಣಿ (ಇ.ಎಂ.ಡಿ) ಯ ಬಾಬ್ತು ಪ್ರತ್ಯೇಕವಾಗಿ ಅಡಿಷನಲ್ ಡೈರೆಕ್ಟರ್ ಜನರಲ್ ಅಫ್ ಪೊಲೀಸ್, ಗುಪ್ತವಾರ್ತೆ, ನಂ.2, ನೃಪತುಂಗ ರಸ್ತೆ, ಬೆಂಗಳೂರು – 1 ರವರ ಹೆಸರಿನಲ್ಲಿ ಡಿಮ್ಯಾಂಡ್ ಡ್ರಾಫ್ಟ್‌ಗಳನ್ನು ಪಡೆಯಬೇಕು. ಇ.ಎಂ.ಡಿ. ಯಲ್ಲಿ ನಮೂದಿಸಲಾದ ಸಾಮಾಗ್ರಿಗಳು ಒಟ್ಟು ಬೆಲೆಗೆ ಶೇಕಡ 2% ರಷ್ಟು ಇರಬೇಕು. ಇಲ್ಲದಿದ್ದಲ್ಲಿ ಪರಿಗಣಿಸಲಾಗುವುದಿಲ್ಲ.

ಆ) ಸರಬರಾಜು ಮಾಡುವ ಸಂಸ್ಥೆಯ ಸಾಮರ್ಥ್ಯದ ಬಗ್ಗೆ ಮಾಹಿತಿ ಮತ್ತು ಸರಬರಾಜು ಮಾಡುವ ಸಾಮಾಗ್ರಿಗಳನ್ನು ಉತ್ಪಾದಿಸಲಾಗುತ್ತಿದೆಯೇ ಅಥವಾ ಇಲ್ಲವೇ ಎಂಬ ಬಗ್ಗೆ ದಾಖಲಾತಿ.

ಇ) ಆರ್ಥಿಕ ಸ್ಥಿತಿ ಮತ್ತು ಸಾಮರ್ಥ್ಯದ ಬಗ್ಗೆ.

ಈ) ಮಾರಾಟ ತೆರಿಗೆ ಮತ್ತು ಆದಾಯ ತೆರಿಗೆ ಬಗ್ಗೆ.

ಉ) ವಾರ್ಷಿಕ ವಹಿವಾಟು.

ಊ) ಟೆಂಡರ್ ಅರ್ಜಿದಾರರು ಸರಬರಾಜು ಮಾಡಲು ಬಯಸುವ ಸಾಮಾಗ್ರಿಗಳ ಪಟ್ಟಿ ಮತ್ತು ಸಾಮಗ್ರಿಗಳ ತಾಂತ್ರಿಕ ವಿವರಣೆ, ಸಾಮಗ್ರಿಗಳ ಬೆಲೆಯನ್ನು ಪಟ್ಟಿಯಲ್ಲಿ ನಮೂದಿಸಬಾರದು.

ಋ) ಅನುಭವ ಮತ್ತು ಹಿಂದೆ ಸರಬರಾಜು ಮಾಡಿರುವ ಬಗ್ಗೆ.

4. **ಎರಡನೇ ಕವರ್ (ಕಮರ್ಷಿಯಲ್ ಬಿಡ್):** ಮೊಹರು ಮಾಡಿದ ಎರಡನೇ ಕವರ್ ಟೆಂಡರ್ ಅರ್ಜಿ ಮತ್ತು ಸರಬರಾಜು ಮಾಡುವ ಸಾಮಾಗ್ರಿಯ ಹೆಸರು ಮತ್ತು ಬೆಲೆ ಪಟ್ಟಿಯನ್ನು ಮಾತ್ರ ಹೊಂದಿರಬೇಕು.
5. ಮೊಹರು ಮಾಡಿದ ಎರಡು ಕವರ್‌ಗಳನ್ನು ಮೇಲೆ ತಿಳಿಸಿದ ರೀತಿಯಲ್ಲಿ **ಶ್ರೀ ಕಮಲ್ ಪಂತ್,ಐ.ಪಿ.ಎಸ್. ರಾಜ್ಯಗುಪ್ತವಾರ್ತೆ ಡೆಪ್ಯೂಟಿ ಪೊಲೀಸ್ ಇನ್ಸ್‌ಪೆಕ್ಟರ್ ಜನರಲ್, ನಂ. 2, ನೃಪತುಂಗ ರಸ್ತೆ, ಬೆಂಗಳೂರು – 1.** ರವರ ಹೆಸರಿಗೆ ದಿನಾಂಕ :10.01.2008 ರ ಸಂಜೆ 4.00 ಗಂಟೆಯೊಳಗೆ ತಲುಪುವಂತೆ ಸಲ್ಲಿಸತಕ್ಕದ್ದು. ತದ ನಂತರ ಸಲ್ಲಿಸಲಾದ/ಪಡೆದ ಅರ್ಜಿಗಳನ್ನು ಪರಿಗಣಿಸುವುದಿಲ್ಲ.
6. ಟೆಂಡರ್ ಆಹ್ವಾನಿಸಿದ ಅಧಿಕಾರಿಯು ದಿನಾಂಕ :11.01.2008 ರಂದು ಬೆಳಿಗ್ಗೆ 11.30 ಗಂಟೆಗೆ **ಮೊದಲನೆ ಕವರ್ (ಟೆಕ್‌ನಿಕಲ್ ಬಿಡ್)** ಅನ್ನು ತೆರೆದು, ಸರಬರಾಜು ಸಂಸ್ಥೆಗಳು ಸಲ್ಲಿಸಲಾದ ಮಾಹಿತಿಗಳನ್ನು/ ದಾಖಲಾತಿಗಳನ್ನು ಪರಿಶೀಲಿಸಿ ಸರಬರಾಜು ಮಾಡುವ ಅರ್ಹ ಸಂಸ್ಥೆಗಳ ಪಟ್ಟಿಯನ್ನು ತಯಾರಿಸಲಾಗುವುದು. ಇಚ್ಚೆಯುಳ್ಳ ಟೆಂಡರ್‌ದಾರರು/ಪ್ರತಿನಿಧಿಗಳು, ಟೆಂಡರ್ ತೆರೆಯುವ ಕಾರ್ಯಕ್ರಮದಲ್ಲಿ ಭಾಗವಹಿಸಲು ಅವಕಾಶವಿರುತ್ತದೆ.
7. ಪ್ರತಿ ಸಾಮಗ್ರಿಗಳಿಗೆ ಪ್ರತ್ಯೇಕವಾದ ಇ.ಎಂ.ಡಿ.ಯನ್ನು ಡಿ.ಡಿ. ಮೂಲಕ ಪಾವತಿಸದಿದ್ದರೆ, ಅಂತಹ ಅರ್ಜಿಗಳನ್ನು ತಿರಸ್ಕರಿಸಲಾಗುವುದು. ಟೆಂಡರ್‌ದಾರರು ಅಂಚೆ ಮೂಲಕ/ಕೋರಿಯರ್ ಮೂಲಕ ಕಳುಹಿಸುವ ಟೆಂಡರ್ ಅರ್ಜಿಗಳು ಮತ್ತು ದಾಖಲಾತಿಗಳು ವಿಳಂಬವಾಗಿ ತಲುಪಿದ್ದಲ್ಲಿ/ನಾಶವಾದಲ್ಲಿ ಇಲಾಖೆಯು ಜವಾಬ್ದಾರಿಯಲ್ಲ. ಇಲಾಖೆಯು ಯಾವುದೇ ಕಾರಣವನ್ನು ನೀಡದೆ ಸಾರಸಗಟಾಗಿ/ಭಾಗಶಃ ಒಪ್ಪಿಕೊಳ್ಳುವ ಅಥವಾ ತಿರಸ್ಕರಿಸುವ ಹಕ್ಕನ್ನು ಕಾಯ್ದಿರಿಸಿದೆ.

**ಕಮಲ್ ಪಂತ್, ಐ.ಪಿ.ಎಸ್**
ಡೆಪ್ಯೂಟಿ ಪೊಲೀಸ್ ಇನ್ಸ್‌ಪೆಕ್ಟರ್ ಜನರಲ್
ಮತ್ತು ಟೆಂಡರ್ ಆಹ್ವಾನಿಸುವ ಪ್ರಾಧಿಕಾರ,
ಗುಪ್ತವಾರ್ತೆ, ಬೆಂಗಳೂರು.

ಪಿ.ಆರ್. 764

**ಹೆಚ್ಚುವರಿ ಪೊಲೀಸ್ ಮಹಾ ನಿರ್ದೇಶಕರ ಕಛೇರಿ, ಅಪರಾಧ ಮತ್ತು ತಾಂತ್ರಿಕ ಸೇವೆಗಳು, ಮಹಾ ನಿರ್ದೇಶಕರು ಮತ್ತು ಪೊಲೀಸ್ ನಿರೀಕ್ಷಕರ ಕಛೇರಿ, ನೃಪತುಂಗ ರಸ್ತೆ, ಬೆಂಗಳೂರು.**

**ಟೆಂಡರ್ ಪ್ರಕಟಣೆ**

**ಸಂಖ್ಯೆ:ಸಂಗ್ರಹ/20/ಎಡಿಜಿಪಿ/ಅ ಮತ್ತು ತಾಂಸೇ/2007–08, ದಿನಾಂಕ: 29ನೇ ನವೆಂಬರ್ 2007**

ಪೊಲೀಸ್ ಇಲಾಖೆಯ ಕರ್ನಾಟಕ ರಾಜ್ಯ ಬೆರಳು ಮುದ್ರೆ ಸಂಗ್ರಹಾಲಯ ಘಟಕದಲ್ಲಿರುವ ಈ ಕೆಳಕಂಡ ಹಾರ್ಡ್‌ವೇರ್ ಉಪಕರಣಗಳನ್ನು ನಗದು ಪಾವತಿ ಮಾಡಿ ಕಾರ್ಯ ನಿರ್ವಹಣೆ ಮಾಡಲು ಮೊಹರು ಮಾಡಿರುವ ದರಪಟ್ಟಿಗಳನ್ನು (ಟೆಂಡರ್) "ದ್ವಿ ಲಕೋಟೆ ಪದ್ಧತಿ" ಯಲ್ಲಿ ಆಹ್ವಾನಿಸಲಾಗಿದೆ.

| Sl. No. | Description of the items | Quantity |
|---|---|---|
| 1 | IBM-X345 Server - Dual Xeon, 2GB RAM, 36GBx3 400GB 17" Col Monitor, KBD, Optical Mouse, CD ROM, 20/40 GB DAT. | 1 |
| 2 | Window 2000 Advance Server | 1 |
| 3 | MS SQL 2000 Server Enterprise | 1 |
| 4 | IBM-X345 Server -dual Xeon, 512MB RAM, 36GBx3 149 GB 3, 17" Col Monitor, KBD, Optical Mouse, CD Rom, 20/40 GB DAT | 1 |
| 5 | Windows 2000 Standard Server | 1 |
| 6 | MS SQL 2000 Standard | 1 |
| 7 | PIV Desktops (SG 10845) 256 MB Ram, 1.44 fdd, 80GB HDD, 17" Col Monitor, KBD, Mouse, CR ROM, Speakers, Microphone, 20/40 GB DAT Drive. | 29 |

| Sl. No. | Description of the items | Quantity |
|---|---|---|
| 8 | PIV Desktops (SG 10845) 256 MB Ram, 1.44 fdd, 80GB HDD, 17" Col Monitor, KBD, Mouse, CR ROM, Speakers, Microphone | 10 |
| 9 | PIV Desktops (SG 10845) 256 MB Ram, 1.44 fdd, 80 GB HDD, 17" Col Monitor, KBD, Mouse, CR ROM, Speakers, Microphone | 12 |
| 10 | 17" Monitor | 2 |
| 11 | Keyboard | 2 |
| 12 | Optical Mouse | 2 |
| 13 | Laser Printer | 31 |
| 14 | Flat Bed Scanner | 39 |
| 15 | Modem Pool Bay | 1 |
| 16 | 56 LBPS Modem Multitech | 10 |
| 17 | 56 LBPS Modem DAX | 30 |
| 18 | KVM Switch | 2 |
| 19 | Windows 2000 Standard Server | 29 |
| 20 | SQL 2000 Standard Server | 29 |

**ಸೂಚನೆ:** ಮೇಲಿನ ಉಪಕರಣದ ಉತ್ಪಾದಕರು/ಉತ್ಪಾದಕ ಘಟಕ/ಉತ್ಪಾದಕ ಘಟಕದ ಅಧಿಕೃತ ಏಜೆಂಟುದಾರರು, ಪ್ರಖ್ಯಾತ ಕಂಪನಿಯ ಬ್ರಾಂಡ್‌ಗಳಿಗೆ ಆದ್ಯತೆ ನೀಡಲಾಗುವುದು.

2. ವಿವರ ಹಾಗೂ ಷರತ್ತನ್ನು ಒಳಗೊಂಡ ಟೆಂಡರ್ ಅರ್ಜಿಯನ್ನು ನಿರ್ದಿಷ್ಟತೆಯೊಂದಿಗೆ (Specifications) ದಿನಾಂಕ: 01.12.2007 ರಿಂದ 31.12.2007 ರವರೆಗೆ ಕಛೇರಿಯ ಕೆಲಸದ ದಿನದಂದು ಬೆಳಿಗ್ಗೆ 10 ಗಂಟೆಯಿಂದ ಸಾಯಂಕಾಲ 4.00 ಗಂಟೆಯೊಳಗೆ ಪೊಲೀಸ್ ಅಧೀಕ್ಷಕರ ಕಛೇರಿ, ಬೆರಳು ಮುದ್ರೆ ಸಂಗ್ರಹಾಲಯ, ಮಡಿವಾಳ, ಬೆಂಗಳೂರು–560 068 ಇಲ್ಲಿ ಪಡೆಯಬಹುದು ಪ್ರತಿ ಟೆಂಡರ್ ಅರ್ಜಿಯ ಬೆಲೆ ರೂ.200–00 ಆಗಿದ್ದು, ಇದನ್ನು ಮರುಪಾವತಿ ಮಾಡಲಾಗುವುದಿಲ್ಲ. ಟೆಂಡರ್ ಅರ್ಜಿಯನ್ನು ನಗದು ಅಥವಾ ಡಿ.ಡಿ.ಮೂಲಕ ಮಾತ್ರ ಪಾವತಿಸಬಹುದಾಗಿದೆ. (ಮನಿಯಾರ್ಡರ್ ಮೂಲಕ ಪಾವತಿಸಿದರೆ ಅಂಗೀಕರಿಸುವುದಿಲ್ಲ) ಟೆಂಡರ್ ಅರ್ಜಿಯನ್ನು ಅಂಚೆ ಮೂಲಕ ಪಡೆಯ ಬಯಸುವವರು ರೂ.200/–ಗಳಿಗೆ ಡಿ.ಡಿ.ಯನ್ನು ಪೊಲೀಸ್ ಅಧೀಕ್ಷಕರು, ಬೆರಳು ಮುದ್ರೆ ಸಂಗ್ರಹಾಲಯ, ಮಡಿವಾಳ, ಬೆಂಗಳೂರು ರವರ ಹೆಸರಿನಲ್ಲಿ ಪಡೆದು ಕಳುಹಿಸಲು ಹಾಗೂ ಸ್ವವಿಳಾಸದೊಂದಿಗೆ ಲಕೋಟೆಯ ಮೇಲೆ ರೂ.30–00 ಗಳ ಅಂಚೆ ಚೀಟಿಯನ್ನು ಅಂಟಿಸಿ ಕಳುಹಿಸಲು ಕೋರಿದೆ.

3. ಟೆಂಡರ್ ಅರ್ಜಿಯನ್ನು ಮೊಹರು ಮಾಡಿದ ಎರಡು ಪ್ರತ್ಯೇಕ ಲಕೋಟೆಗಳಲ್ಲಿ ಈ ಕೆಳಕಂಡಂತೆ ಕಳುಹಿಸಬೇಕಾಗಿರುತ್ತದೆ.

ಅ) ಮೊಹರು ಮಾಡಿದ ಒಂದನೇ ಲಕೋಟೆ/ಕವರಿನ ಮೇಲ್ಭಾಗದಲ್ಲಿ "ನಗದು ಪಾವತಿ ಮಾಡಿ ಹಾರ್ಡ್‌ವೇರ್‌ಗಳ ಕಾರ್ಯ ನಿರ್ವಹಣೆಗಾಗಿ "ಎಂದು ಹಾಗೂ ಕವರಿನ/ಲಕೋಟೆಯ ಕೆಳಭಾಗದಲ್ಲಿ ಸರಬರಾಜು ಮಾಡುವ ಸಂಸ್ಥೆಯ ಹೆಸರು ಮತ್ತು ವಿಳಾಸವನ್ನು ನಮೂದಿಸಬೇಕು.

ಆ) ಮೊಹರು ಮಾಡಿದ ಎರಡನೇ ಕವರಿನ/ಲಕೋಟೆಯ ಮೇಲ್ಭಾಗದಲ್ಲಿ **"ನಗದು ಪಾವತಿ ಮಾಡಿ ಹಾರ್ಡ್‌ವೇರ್‌ಗಳ ಕಾರ್ಯ ನಿರ್ವಹಣೆ ಬೆಲ ಪಟ್ಟಿ"** ಎಂದು ಮತ್ತು ಕವರಿನ/ಲಕೋಟೆಯ ಕೆಳಭಾಗದಲ್ಲಿ ಸರಬರಾಜು ಮಾಡುವ ಸಂಸ್ಥೆಯ ಹೆಸರು ಮತ್ತು ವಿಳಾಸವನ್ನು ನಮೂದಿಸಬೇಕು.

4. ಮೊದಲನೆ ಕವರ್/ಲಕೋಟೆ : ಮೊಹರು ಮಾಡಿದ ಮೊದಲನೆ ಕವರ್/ಲಕೋಟೆಯ ಈ ಕೆಳಕಂಡ ಮಾಹಿತಿಯನ್ನು ಒಳಗೊಂಡಿರಬೇಕು.

ಅ) ಸರಬರಾಜು ಮಾಡಲು ಇಚ್ಚಿಸುವ ಪ್ರತಿಯೊಂದು ಸಾಮಗ್ರಿಗಳ ಬಾಬ್ತು ಪ್ರತ್ಯೇಕವಾಗಿ ಪೊಲೀಸ್ ಅಧೀಕ್ಷಕರು, ಬೆರಳು ಮುದ್ರೆ ಸಂಗ್ರಹಾಲಯ, ಮಡಿವಾಳ, ಬೆಂಗಳೂರು ರವರ ಹೆಸರಿನಲ್ಲಿ ಪಡೆದ ಡಿಮ್ಯಾಂಡ್ ಡ್ರಾಫ್ಟ್‌ಗಳು (ಇ.ಎಂ.ಡಿ.ಯಲ್ಲಿ ನಮೂದಿಸಲಾದ ಸಾಮಗ್ರಿಯ ಒಟ್ಟು ಬೆಲೆಗೆ ಶೇ 2 ರಷ್ಟು ಇರಬೇಕು)

ಆ) ಉಪಕರಣಗಳನ್ನು ಸರಬರಾಜು ಮಾಡುವ ಸಂಸ್ಥೆಯ ಸಾಮರ್ಥ್ಯದ ಬಗ್ಗೆ ಮಾಹಿತಿಗಳನ್ನು ಹಾಗೂ ಆರ್ಥಿಕ ಸ್ಥಿತಿ ಮತ್ತು ಸಾಮರ್ಥ್ಯ ಮಾರಾಟ ತೆರಿಗೆ ಮತ್ತು ಆದಾಯ ತೆರಿಗೆ ಬಗ್ಗೆ ಮಾಹಿತಿ ಒಳಗೊಂಡಿರಬೇಕು.

5) ಎರಡನೇ ಕವರ್/ಲಕೋಟೆ: ಮೊಹರು ಮಾಡಿದ ಎರಡನೇ ಕವರ್/ಲಕೋಟೆ ಟೆಂಡರ್ ಅರ್ಜಿ ಮತ್ತು ಕಾರ್ಯ ನಿರ್ವಹಣೆ ಬೆಲೆ ಪಟ್ಟಿಯನ್ನು ಮಾತ್ರ ಹೊಂದಿರಬೇಕು.

6) ಮೊಹರು ಮಾಡಿದ ಎರಡು ಕವರ್/ಲಕೋಟೆಗಳನ್ನು ಮೇಲೆ ತಿಳಿಸಿದ ರೀತಿಯಲ್ಲಿ ಶ್ರೀ ಎಂ.ನರಸಿಂಹಯ್ಯ, ಸೂಪರಿಂಟೆಂಡೆಂಟ್ ಆಫ್ ಪೊಲೀಸ್, ಬೆರಳು ಮುದ್ರೆ ಸಂಗ್ರಹಾಲಯ, ಮಡಿವಾಳ, ಬೆಂಗಳೂರು–560 068 ರವರ ಹೆಸರಿಗೆ ದಿನಾಂಕ: 31.12.2007 ಸಂಜೆ 5–00 ಗಂಟೆ ಒಳಗೆ ತಲುಪುವಂತೆ ಸಲ್ಲಿಸತಕ್ಕದ್ದು. ತದನಂತರ ಸಲ್ಲಿಸಲಾದ/ಪಡೆದ ಅರ್ಜಿಗಳನ್ನು ಪರಿಗಣಿಸುವುದಿಲ್ಲ.

7. ಟೆಂಡರ್ ಆಹ್ವಾನಿಸಿದ ಅಧಿಕಾರಿಯು ದಿನಾಂಕ: 04.01.2008 ರಂದು (ತಾತ್ಕಾಲಿಕ) ಬೆಳಿಗ್ಗೆ 11–00 ಗಂಟೆಗೆ ಮೊದಲನೆ ಕವರನ್ನು/ಲಕೋಟೆಯನ್ನು ತೆರೆದು, ಹಾರ್ಡ್‌ವೇರ್ ಕಾರ್ಯ ನಿರ್ವಹಣೆ ಮಾಡುವ ಸಂಸ್ಥೆಗಳು ಸಲ್ಲಿಸಲಾದ ಮಾಹಿತಿಗಳನ್ನು/ದಾಖಲಾತಿಗಳನ್ನು ಪರಿಶೀಲಿಸಿ, ಸರಬರಾಜು ಮಾಡುವ ಅರ್ಹ ಸಂಸ್ಥೆಗಳ ಪಟ್ಟಿಯನ್ನು ತಯಾರಿಸಲಾಗುವುದು. ಇಚ್ಚೆಯುಳ್ಳ ಟೆಂಡರ್‌ದಾರರು/ಪ್ರತಿನಿಧಿಗಳು, ಟೆಂಡರ್ ತೆರೆಯುವ ಕಾರ್ಯಕ್ರಮದಲ್ಲಿ ಭಾಗವಹಿಸಲು ಅವಕಾಶವಿರುತ್ತದೆ.

8. ಪ್ರತಿ ಸಾಮಗ್ರಿಗಳಿಗೆ ಪ್ರತ್ಯೇಕವಾದ ಇ.ಎಂ.ಡಿ.ಯನ್ನು ಡಿ.ಡಿ. ಮೂಲಕ ಪಾವತಿಸದಿದ್ದರೆ ಅಂತಹ ಅರ್ಜಿಗಳನ್ನು ತಿರಸ್ಕರಿಸಲಾಗುವುದು. ಟೆಂಡರ್‌ದಾರರು ಅಂಚೆ ಮೂಲಕ/ಕೋರಿಯರ್ ಮೂಲಕ ಕಳುಹಿಸುವ ಟೆಂಡರ್ ಅರ್ಜಿಗಳು ಮತ್ತು ದಾಖಲಾತಿಗಳು ವಿಳಂಬವಾಗಿ ತಪುಪಿದ್ದಲ್ಲಿ/ನಾಶವಾದಲ್ಲಿ ಇಲಾಖೆಯು ಜವಾಬ್ದಾರಿಯಲ್ಲ. ಇಲಾಖೆಯ ಯಾವುದೇ ಕಾರಣವನ್ನು ನೀಡದೇ ಸರಾಸಗಟಾಗಿ/ಭಾಗಶಃ ಒಪ್ಪಿಕೊಳ್ಳುವ ಅಥವಾ ತಿರಸ್ಕರಿಸುವ ಹಕ್ಕನ್ನು ಕಾಯ್ದಿರಿಸಿದೆ.

9. ಈ ಟೆಂಡರ್ ನೋಟಿಫಿಕೇಷನ್ ಅಧಿಕೃತ ಪೊಲೀಸ್ ವೆಬ್‌ಸೈಟ್ "WWW.karnatakastatepolice.org" ಮತ್ತು ಕರ್ನಾಟಕ ಸರ್ಕಾರದ ಅಧಿಕೃತ ವೆಬ್‌ಸೈಟ್ "WWW.kar.nic.in.statebudget" ಗಳಲ್ಲಿಯೂ ಲಭ್ಯವಿರುತ್ತದೆ.

ಹೆಚ್ಚುವರಿ ಪೊಲೀಸ್ ಮಹಾ ನಿರ್ದೇಶಕರು,
ಪಿ.ಆರ್. 749 ಅಪರಾಧ ಮತ್ತು ತಾಂತ್ರಿಕ ಸೇವೆಗಳು, ಬೆಂಗಳೂರು.

## ಕಾರ್ಯನಿರ್ವಾಹಕ ಅಭಿಯಂತರರ ಕಛೇರಿ, ಲೋಕೋಪಯೋಗಿ ಇಲಾಖೆ, ರಾಯಚೂರು ವಿಭಾಗ, ರಾಯಚೂರು

### ಟೆಂಡರು ಪ್ರಕಟಣೆ

**(ಎರಡು ಲಕೋಟೆ ಪದ್ಧತಿ)**

**ಕ್ರ.ಸಂ. / ಲೋಇ / ರಾವಿ / ಡಿ.ಎಂ. / ಟೆಂಡರ್ / 2007-2008 / 2197, ದಿನಾಂಕ: 20ನೇ ನವೆಂಬರ್ 2007**

ಈ ಕೆಳಗೆ ನಮೂದಿಸಿದ ಕಾಮಗಾರಿಗೆ ಪಿ.ಡಬ್ಲ್ಯು.ಜಿ. 65 ಮತ್ತು 66 ಎಸ್.ಐ.ಟಿ. ನಿಯಮಾವಳಿಯಂತೆ ನಿಗದಿತ ಶೆಡ್ಯೂಲ್‌ಗಳಲ್ಲಿ ದ್ವಿಪ್ರತಿಯಲ್ಲಿ ಐಟಂವಾರ್ ಎರಡು ಲಕೋಟೆ ಪದ್ಧತಿಯಲ್ಲಿ ಅಂದರೆ "ತಾಂತ್ರಿಕ ಬಿಡ್" ಮತ್ತು "ಆರ್ಥಿಕ ಬಿಡ್" ಟೆಂಡರನ್ನು ಕರ್ನಾಟಕ ಪಾರದರ್ಶಕ ನಿಯಮಾವಳಿ-2000ರ ಪ್ರಕಾರ ಕರ್ನಾಟಕ ಲೋಕೋಪಯೋಗಿ ಇಲಾಖೆಯಲ್ಲಿ ನೊಂದಾಯಿತರಾಗಿರುವ ಮೊದಲನೇ ದರ್ಜೆ ಗುತ್ತಿಗೆದಾರರಿಂದ ಮೊಹರು ಟೆಂಡರುಗಳನ್ನು ಆಹ್ವಾನಿಸಲಾಗಿದೆ.

ಭರ್ತಿಮಾಡಿದ ಟೆಂಡರುಗಳನ್ನು ಗುತ್ತಿಗೆದಾರರು ಕಾರ್ಯನಿರ್ವಾಹಕ ಅಭಿಯಂತರರ ಕಛೇರಿ, ಲೋಕೋಪಯೋಗಿ ಇಲಾಖೆ ರಾಯಚೂರು ವಿಭಾಗ ರಾಯಚೂರು, ಇವರ ಕಛೇರಿಯಲ್ಲಿ ನಿಗದಿತ ದಿನಾಂಕ ಮತ್ತು ವೇಳೆಯಲ್ಲಿ ಸಲ್ಲಿಸತಕ್ಕದ್ದು ತಾಂತ್ರಿಕ ಬಿಡ್‌ಗಳನ್ನು ಈ ಕೆಳಗೆ ನಮೂದಿಸಿದ ದಿನಾಂಕದಂದು ಈ ಕೆಳಗೆ ಸಹಿ ಮಾಡಿದ ಅಧಿಕಾರಿಗಳಿಂದ ತೆರೆಯಲಾಗುವುದು. ತಾಂತ್ರಿಕ ಬಿಡ್‌ನಲ್ಲಿ ಅರ್ಹತೆ ಪಡೆದಿರುವ ಗುತ್ತೇದಾರರಿಗೆ ತಿಳುವಳಿಕೆ ನೀಡಿ ಆರ್ಥಿಕ ಬಿಡ್‌ಗಳನ್ನು ತೆರೆಯಲಾಗುವುದು. ಅಕಸ್ಮಾತ್ ಈ ಕೆಳಗೆ ನಮೂದಿಸಿದ ದಿನಾಂಕವು ಸಾರ್ವತ್ರಿಕ ರಜಾ ದಿನವೆಂದು ಸಂಭವಿಸಿದಲ್ಲಿ ಮುಂದಿನ ಕಛೇರಿ ಕೆಲಸದ ದಿನಾಂಕವನ್ನು ಪರಿಗಣಿಸಬೇಕು.

ಅರ್ಜಿ ಸಲ್ಲಿಸುವ ಗುತ್ತಿಗೆದಾರರು ತಮ್ಮ ಅರ್ಜಿಯೊಡನೆ ಮೂಲ ನೊಂದಣಿ ಪ್ರಮಾಣ ಪತ್ರ ಪರಿಶೀಲನೆಗಾಗಿ ತರಬೇಕು. ಒಂದು ವೇಳೆ ನೊಂದಾಣಿ ಪ್ರಮಾಣ ಪತ್ರ ತರದೆ ಇದ್ದ ಪಕ್ಷದಲ್ಲಿ ಅರ್ಜಿಯನ್ನು ಸ್ವೀಕರಿಸುವುದಿಲ್ಲ. ಟೆಂಡರ್ ದಾಖಲೆಯ ಶುಲ್ಕವನ್ನು (ಹಿಂತಿರುಗಿಸಲಾಗುವುದಿಲ್ಲ) ಕಾರ್ಯನಿರ್ವಾಹಕ ಇಂಜಿನೀಯರರವರ ಹೆಸರಿನ ಮೇಲೆ ಡಿಮ್ಯಾಂಡ್ ಡ್ರಾಫ್ಟ್ ರೂಪದಲ್ಲಿ ನಿಗದಿಪಡಿಸಿದ ದಿನಾಂಕದಂದು ಅಥವಾ ಪೂರ್ವದಲ್ಲಿಯೇ ಸಲ್ಲಿಸಬೇಕು.

| ಕ್ರ. ಸಂ. | ಕಾಮಗಾರಿಯ ಹೆಸರು | ಮಂಜೂರಾದ ಅಂದಾಜು ಮೊತ್ತ (ಲಕ್ಷ ರೂ.ಗಳಲ್ಲಿ) | ಟೆಂಡರ್‌ಗೆ ಇಟ್ಟ ಹಣ (ರೂ. ಗಳಲ್ಲಿ) | ಮುಂಗಡ ಠೇವಣಿ ಹಣ (ರೂ. ಗಳಲ್ಲಿ) | ಟೆಂಡರ್ ಖರೀದಿಯ ಬೆಲೆ ತೆರಿಗೆ ಸಹಿತ (ರೂ.ಗಳಲ್ಲಿ) | ಕಾಮಗಾರಿಯನ್ನು ಮುಗಿಸುವ ಕಾಲಾವಧಿ (ಮಳೆಗಾಲ ಸೇರಿ) | ಕರೆಯ ಸಂಖ್ಯೆ ಟೆಂಡರಿನ ವಿಧಾನ | ಗುತ್ತೇದಾರರ ದರ್ಜೆ |
|---|---|---|---|---|---|---|---|---|
| | **ಕೇಂದ್ರ ರಸ್ತೆ ನಿಧಿ (ಸಿ.ಆರ್.ಎಫ್.) ಯೋಜನೆ ಅಡಿಯಲ್ಲಿ** | | | | | | | |
| 1. | ರಾಯಚೂರು ಜಿಲ್ಲೆಯ ಸಿಂಧನೂರು ತಾಲ್ಲೂಕಿನ ಎಸ್-ಬಿ ರಸ್ತೆಯಿಂದ ಜವಳಗೇರಾ ರಸ್ತೆ ಸುಧಾರಣೆ | 80-00 | 80,00,000-00 | 80,000-00 | 5,500-00 | ಒಂಬತ್ತು ತಿಂಗಳು (ಮಳೆಗಾಲ ಸೇರಿ) | ಮೊದಲನೇ ಕರೆ ಮತ್ತು ಐಟಂವಾರ್ | ಒಂದನೇ ದರ್ಜೆ ಲೋ. ಇ. ಗುತ್ತಿಗೆದಾರರು |
| 2. | ರಾಯಚೂರು ಜಿಲ್ಲೆಯ ದೇವದುರ್ಗ ತಾಲ್ಲೂಕಿನ ದೇವದುರ್ಗ - ಸಿರವಾರ ರಸ್ತೆ ಕಿ.ಮೀ. 30.00 ರಲ್ಲಿ ಅಗಲೀಕರಣ ಮಾಡುವುದು. (ಮನಗೊಳಿ-ಬಿಚ್ಚಾಲ ರಾ.ಹೆ.- 61 ಕಿ.ಮೀ. 181.50 ರಿಂದ 185.50ರ ವರೆಗೆ ಅಗಲೀಕರಣ ಮಾಡುವುದು. | 100-00 | 100,00,000-00 | 1,00,000-00 | 5,500-00 | ಒಂಬತ್ತು ತಿಂಗಳು (ಮಳೆಗಾಲ ಸೇರಿ) | ಮೊದಲನೇ ಕರೆ ಮತ್ತು ಐಟಂವಾರ್ | ಒಂದನೇ ದರ್ಜೆ ಲೋ. ಇ. ಗುತ್ತಿಗೆದಾರರು |

**ಗುತ್ತೇದಾರರು ಎರಡು ಲಕೋಟೆ ಪದ್ಧತಿಯಂತೆ ಟೆಂಡರನ್ನು ಈ ಕೆಳಗಿನ ವಿವರಗಳೊಂದಿಗೆ ಸಲ್ಲಿಸತಕ್ಕದ್ದು.**

**ಒಂದನೇ ಲಕೋಟೆಯಲ್ಲಿ ಸಲ್ಲಿಸಬೇಕಾದ ವಿವರಗಳು. (ಟೆಕ್ನಿಕಲ್ ಬಿಡ್)**

1. ದೃಢೀಕೃತ ಕರ್ನಾಟಕ ಸರ್ಕಾರದ ಮೊದಲನೇ ದರ್ಜೆಯ ಗುತ್ತಿಗೆದಾರರ ನೊಂದಣಿಪತ್ರ 2005-2010ನೇ ಬ್ಲಾಕ್ ಅವಧಿಗೆ ನವೀಕೃತಗೊಳಿಸಿರತಕ್ಕದ್ದು.
2. ದೃಢೀಕೃತ ಗುತ್ತಿಗೆದಾರರ ಅನುಭವ ಪ್ರಮಾಣ ಪತ್ರ.
3. ಮುಂಗಡ ಠೇವಣಿ ಹಣದ ಮೊತ್ತ.
4. ದೃಢೀಕೃತ ಯಂತ್ರಗಳ ವೊನರ್‌ಶಿಪ್ ದಾಖಲೆಗಳು

**ಎರಡನೇ ಲಕೋಟೆಯಲ್ಲಿ ಸಲ್ಲಿಸಬೇಕಾದ ವಿವರಗಳು. (ಫೈನಾನ್ಶಿಯಲ್ ಬಿಡ್)**

ಗುತ್ತಿಗೆದಾರರ ದರ ನಮೂದಿಸಿದ ಟೆಂಡರು ಪುಸ್ತಕಗಳು (ಶೆಡ್ಯೂಲ್-ಬಿ) ದ್ವಿಪ್ರತಿಯಲ್ಲಿ ಸಲ್ಲಿಸತಕ್ಕದ್ದು.

ಮೇಲಿನ ಪ್ರತ್ಯೇಕ ಲಕೋಟೆ ಮೇಲೆ "ಟೆಕ್ನಿಕಲ್ ಬಿಡ್", "ಫೈನಾನ್ಶಿಯಲ್ ಬಿಡ್" ಕಾಮಗಾರಿಯ ಹೆಸರು ಗುತ್ತಿಗೆದಾರರ ಹೆಸರು ಹಾಗೂ ಅಂಚೆ ವಿಳಾಸ ನಮೂದಿಸತಕ್ಕದ್ದು.

**ಷರತ್ತುಗಳು:**

(1) ರಸ್ತೆ ಕಾಮಗಾರಿಯನ್ನು ಹೆಚ್.ಎಂ.ಪಿ ಪೇವರಗಳನ್ನು ಉಪಯೋಗಿಸಿ ನಿರ್ವಹಿಸುವುದು.

(2) ಗುತ್ತೇದಾರರು, ಅನುಭವ ಪ್ರಮಾಣ ಪತ್ರವನ್ನು ತಪ್ಪದೇ ಸಲ್ಲಿಸಬೇಕು ಸದರಿ ಪ್ರಮಾಣ ಪತ್ರ ಟೆಂಡರಿಗೆ ಇಟ್ಟ ಹಣ ಮೊತ್ತದ ಶೇಕಡಾ ಮೂವತ್ತು (30)ರಷ್ಟು ಮೊತ್ತಕ್ಕೆ ಕಡಿಮೆ ಇಲ್ಲದಂತೆ ಇಂತಹ ರಸ್ತೆ ಕಾಮಗಾರಿಯನ್ನು ಕಳೆದ ಐದು ವರ್ಷದ ಅಂದರೆ 2001-2006 ಅವಧಿಯಲ್ಲಿ ಯಾವುದಾದರೂ ಒಂದು ಆರ್ಥಿಕ ವರ್ಷದಲ್ಲಿ ನಿರ್ವಹಿಸಿರತಕ್ಕದ್ದು (ಹಿಂದಿನ ವರ್ಷಗಳಲ್ಲಿ ನಿರ್ವಹಿಸಿದ ಕಾಮಗಾರಿಗಳಿಗೆ ಪ್ರತಿ ವರ್ಷ ಶೇಕಡಾ ಹತ್ತು (10) ರಂತೆ ಕಂಪೌಂಡಿಂಗ್ ಹೆಚ್ಚುವರಿ ಪರಿಗಣಿಸಲಾಗುವುದು) ಪರ್ಯಾಯವಾಗಿ ಗುತ್ತೇದಾರರು ಪ್ರಸ್ತುತ ಸಾಲಿನಲ್ಲಿ ಕೈಗೊಂಡ ಚಾಲ್ತಿಯಲ್ಲಿರುವ ಕಾಮಗಾರಿಯ ಶೇಕಡಾ 30 ರಷ್ಟು ಮೊತ್ತಕ್ಕೆ ಕಡಿಮೆ ಇಲ್ಲದಂತೆ ಇಂತಹ ರಸ್ತೆ ಕಾಮಗಾರಿಯನ್ನು ನಿರ್ವಹಿಸಿದ ಬಗ್ಗೆ ಅನುಭವ ಪ್ರಮಾಣ ಪತ್ರವನ್ನು ಸಂಬಂಧಪಟ್ಟ ಕಾರ್ಯನಿರ್ವಾಹಕ ಇಂಜಿನಿಯರ್ ಅಧಿಕಾರಿಯಿಂದ ಪಡೆದು ಸಹ ಸಲ್ಲಿಸಬಹುದು.

(3) ಗುತ್ತೇದಾರರು, ಯಂತ್ರಗಳ ಓನರ್‌ಶಿಪ್ ಅಥವಾ ಲೀಸ್ ದಾಖಲೆಗಳ ವಿವರಗಳು ಕೆಳಗೆ ನಮೂದಿಸಿದಂತೆ ಸಲ್ಲಿಸತಕ್ಕದ್ದು.

| ಕ್ರ. ಸಂ. | ಯಂತ್ರಗಳು | ಪರಿಗಣಿಸಬೇಕಾದ ಸಂ. | ಸಲ್ಲಿಸಬೇಕಾದ ದಾಖಲೆಗಳು |
|---|---|---|---|
| 1. | ಟಿಪ್ಪರ್‌ಗಳು | ನಾಲ್ಕು (4) ನಂ. | ಆರ್.ಟಿ.ಓ. ಇವರಿಂದ ಪಡೆದಿರುವ ನೊಂದಾಣಿ ಪತ್ರ ಮತ್ತು ಈಗಿನ ವರೆಗೆ ವಿಮಾ. |
| 2. | ಸ್ಟ್ಯಾಟಿಕ್ ರೋಡ ರೂಲರ್ | ಎರಡು (2) ನಂ. | ಮಾರಾಟ ಇನ್‌ವೈಸ್: ಬಿಲ್ಲು ಅಥವಾ ನೊಂದಾಯಿತ ಸೇಲ್ ಡೀಡ್ (ಮೂಲ ಇನ್‌ವೈಸ್ ಬಿಲ್ಲು ಜೊತೆಗೆ) |
| 3. | ವಾಹನಕ್ಕೆ ಅಂಟಿಸಿರುವ ಬಿಟುಮಿನಸ್ ಮೇಕಾನಿಕಲ್ ಸ್ಪ್ರೇಯರ್ | ಒಂದು (1) ನಂ. | ಮಾರಾಟ ಇನ್‌ವೈಸ್: ಬಿಲ್ಲು ಅಥವಾ ನೊಂದಾಯಿತ ಸೇಲ್ ಡೀಡ್ (ಮೂಲ ಇನ್‌ವೈಸ್ ಬಿಲ್ಲು ಜೊತೆಗೆ) |

(4) ಟೆಂಡರ್ ಜೊತೆಗೆ ಲಗತ್ತಿಸಿದ ಎಲ್ಲ ಪ್ರಮಾಣ ಪತ್ರಗಳನ್ನು ಪತ್ರಾಂಕಿತ ಅಧಿಕಾರಿ / ನೋಟರಿಯವರಿಂದ ನೋಟರಿ ಮುದ್ರೆಯೊಂದಿಗೆ ದೃಢೀಕರಿಸಿ ಸಲ್ಲಿಸತಕ್ಕದ್ದು, ಮೂಲಪ್ರಮಾಣ ಪತ್ರಗಳನ್ನು ಬೇಕೆಂದಾಗ ಪರಿಶೀಲನೆಗೆ ಒದಗಿಸತಕ್ಕದ್ದು.

(5) ಮುಂಗಡ ಠೇವಣಿ ಹಣ ಮೊತ್ತವನ್ನು ಕಾರ್ಯನಿರ್ವಾಹಕ ಇಂಜಿನಿಯರರ ಹೆಸರಿನಲ್ಲಿ ತೆಗೆಸಿದ ರಾಷ್ಟ್ರೀಕೃತ / ಶೆಡ್ಯೂಲ್ ಬ್ಯಾಂಕಿನಿಂದ ಮಾಡಿದ ಬ್ಯಾಂಕ್ ಗ್ಯಾರಂಟಿ, ಕಾಲ್ ಡಿಪಾಸಿಟ್, ಡಿ.ಡಿ. ಪೇ ಆರ್ಡರ್, ಬ್ಯಾಂಕರ್ಸ್ ಚೆಕ್, ಡಿ.ಡಿ. ಅಂಚೆ ಕಛೇರಿಯಿಂದ ಪ್ಲೆಡ್ಜ್ ಮಾಡಿದ ರಾಷ್ಟ್ರೀಯ ಉಳಿತಾಯ ಪತ್ರಗಳ, ರೂಪದಲ್ಲಿ ಮಾತ್ರ ಸಲ್ಲಿಸತಕ್ಕದ್ದು.

(6) ಕಾಮಗಾರಿಗೆ ಬೇಕಾಗಿರುವ ಐ.ಆರ್.ಸಿ. ಮತ್ತು ಐ.ಎಸ್.ಐ. ಮಾರ್ಕ್ ಹೊಂದಿರುವ ಎಲ್ಲಾ ಸಾಮಾಗ್ರಿಗಳನ್ನು (ಅಂದರೆ ಡಾಂಬರು, ಉಕ್ಕು, ಸಿಮೆಂಟ್, ಹ್ಯೂಮ್‌ಪೈಪ್ ಇತ್ಯಾದಿ) ಗುತ್ತಿಗೆದಾರರು ತಾವೇ ಪೂರೈಸಿಕೊಳ್ಳಬೇಕು. ಇಲಾಖೆಯಿಂದ ಯಾವುದೇ ಸಾಮಗ್ರಿಗಳನ್ನು ಪೂರೈಸಲಾಗುವುದಿಲ್ಲ, ಹಾಗೂ ಗುಣನಿಯಂತ್ರಣ ಪರೀಕ್ಷೆಯ ಬೆಲೆಯನ್ನು ಗುತ್ತಿಗೆದಾರರು ತುಂಬಬೇಕಾಗುತ್ತದೆ.

(7) ಯಾವುದೇ ಟೆಂಡರನ್ನು / ಎಲ್ಲಾ ಟೆಂಡರ್‌ಗಳನ್ನು ಯಾವುದೇ ಕಾರಣವನ್ನು ನೀಡದೆ ತಿರಸ್ಕರಿಸುವ ಹಕ್ಕನ್ನು ಸಕ್ಷಮ ಅಧಿಕಾರಿಗಳು ಹೊಂದಿರುತ್ತಾರೆ.

(8) ಹೆಚ್ಚಿನ ಮಾಹಿತಿಗಳು ಬೇಕಾದಲ್ಲಿ ಕಾರ್ಯನಿರ್ವಾಹಕ ಇಂಜಿನೀಯರರು, ಲೋಕೋಪಯೋಗಿ ಇಲಾಖೆ ರಾಯಚೂರು ವಿಭಾಗ ರಾಯಚೂರು, ಇವರ ಕಛೇರಿಯಿಂದ ಕೆಲಸದ ವೇಳೆಯಲ್ಲಿ ಸಂಪರ್ಕಿಸಿ ಪಡೆಯಬಹುದು.

**ನಿಗದಿಪಡಿಸಿದ ದಿನಾಂಕವು ಈ ಕೆಳಗಿನಂತೆ ಇರುತ್ತದೆ.**

| | | | |
|---|---|---|---|
| 1) | ಅರ್ಜಿಯನ್ನು ಸಲ್ಲಿಸುವ ಕೊನೆಯ ದಿನಾಂಕ ಕಚೇರಿ ವೇಳೆಯಲ್ಲಿ | - | 28.12.2007 |
| 2) | ಖಾಲಿ ಟೆಂಡರ್ ಷೆಡ್ಯೂಲ್‌ಗಳನ್ನು ನೀಡುವ ದಿನಾಂಕ ಕಚೇರಿ ವೇಳೆಯಲ್ಲಿ | - | 31.12.2007 |
| 3 | ಭರ್ತಿ ಮತ್ತು ಮೊಹರು ಮಾಡಿದ ಟೆಂಡರುಗಳನ್ನು ಸ್ವೀಕರಿಸುವ ದಿನಾಂಕ (ಸಾಯಂಕಾಲ 4.00 ಗಂಟೆವರೆಗೆ) | - | 02.01.2008 |
| 4) | ಟೆಂಡರ್‌ಗಳನ್ನು ತೆರೆಯುವ ದಿನಾಂಕ ಸಾಧ್ಯವಿದ್ದಲ್ಲಿ | | |
| | (ಅ) ತಾಂತ್ರಿಕ ಬಿಡ್ (ಸಾಯಂಕಾಲ 5.00 ಗಂಟೆಗೆ) | - | 02.01.2008 |
| | (ಆ) ಆರ್ಥಿಕ ಬಿಡ್ | - | ತಿಳುವಳಿಕೆ ನೀಡಿದ ದಿನಾಂಕದಂದು. |

**ಹೆಚ್.ಎಂ. ಕಾಲೆಖಾನವರ್**

ಪಿ.ಆರ್. 750

ಕಾರ್ಯನಿರ್ವಾಹಕ ಇಂಜಿನೀಯರ್

ಲೋ. ಇ. ವಿಭಾಗ, ರಾಯಚೂರು.

**ಅಧಿಕಾರಿಯುತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳವರ ಕಚೇರಿ, ಅರಣ್ಯ ಸಂಚಾರಿ ದಳ, ಹಾಸನ.**

**ಟೆಂಡರು ಮತ್ತು ಹರಾಜು ಪ್ರಕಟಣೆ**

**ಸಂಖ್ಯೆ: ಹಾಸನ.ಅಸಂದಳ.ಅಮೊ:ವಾಹನ ಹರಾಜು:1/2007-08, ದಿನಾಂಕ: 27ನೇ ನವೆಂಬರ್ 2007**

ಈ ಮೂಲಕ ಸಾರ್ವಜನಿಕರಿಗೆ ತಿಳಿಸುವುದೇನೆಂದರೆ ಅರಣ್ಯ ತಕ್ಷೀರಿನಲ್ಲಿ ಅಮಾನತ್ತುಗೊಳಿಸಿ ಮುಟ್ಟುಗೋಲು ಹಾಕಿಕೊಂಡಿರುವ ಈ ಕೆಳಕಂಡ ವಾಹನಗಳನ್ನು ಅವುಗಳು ಎಲ್ಲಿ ಹೇಗೆ ಇವೆಯೋ ಹಾಗೆ ದಿನಾಂಕ:23.1.2008 ರಂದು ಹಾಸನ ಗಂಧದ ಕೋಠಿ ಆವರಣದಲ್ಲಿ ಈ ಕೆಳಗೆ ಸಹಿ ಮಾಡಿರುವ ಅಥವಾ ಅವರಿಂದ ನೇಮಿಸಲ್ಪಟ್ಟ ಅಧಿಕಾರಿಗಳವರಿಂದ ನಿಗದಿತ ಷರತ್ತುಗಳಿಗೆ ಒಳಪಟ್ಟಂತೆ ಟೆಂಡರ್ ಮತ್ತು ಬಹಿರಂಗ ಹರಾಜು ಮಾಡಲಾಗುವುದು. **ಕಾರಣಾಂತರಗಳಿಂದ ಸದರಿ ದಿನದಂದು ಹರಾಜು ನಡೆಸಲು ಸಾಧ್ಯವಾಗದಿದ್ದಲ್ಲಿ ದಿನಾಂಕ: 26.2.2008 ರಂದು ನಡೆಸಲಾಗುವುದು.**

**ವಾಹನಗಳ ವಿವರ**

| ಕ್ರ. ಸಂ. | ವಾಹನಗಳ ವಿವರ | ನೋಂದಾಯಿತ ಸಂಖ್ಯೆ | ಟೆಂಡರಿನ ಮತ್ತು ಹರಾಜಿನ ದಿನಾಂಕ ಮತ್ತು ಸ್ಥಳ, ಸಮಯ |
|---|---|---|---|
| 1. | ಮಹೇಂದ್ರ ಜೀಪು | ಕೆಎಲ್-14-ಎ-7299 | ಟೆಂಡರ್ ದಿನಾಂಕ: 23.1.2008 ಬೆಳಿಗ್ಗೆ 12.00 ಗಂಟೆಗೆ ಹರಾಜು ದಿನಾಂಕ: 23.1.2008 ಮಧ್ಯಾಹ್ನ 1.00 ಗಂಟೆಗೆ<br><br>ಅಥವಾ ಈ ದಿನ ಹರಾಜು ನಡೆಯದಿದ್ದಲ್ಲಿ **ದಿನಾಂಕ:26.2.2008 ರಂದು ಇದೇ ಸಮಯಕ್ಕೆ ಹರಾಜು ಕ್ರಮ ಜರುಗಿಸಲಾಗುವುದು.** |
| 2. | ಮಹೇಂದ್ರ ಜೀಪು | ಕೆಎ-28-ಎಂ-399 | |
| 3. | ಮಾರುತಿ ಎಸ್ಟೀಮ್ (ಮರು ಹರಾಜು) | ಕೆಎ-13-ಎಂ-4856 | |
| 4. | ಆಟೋ ರಿಕ್ಷಾ | ಸಿಟಿಎಕ್ಸ್-485 | |
| 5. | ಗೂಡ್ಸ್ ಆಟೋ | ಕೆಎ-15-2286 | |
| 6. | ಅಂಬಾಸಿಡರ್ ಕಾರು (ಇಲಾಖಾ ನಿರುಪಯುಕ್ತ ವಾಹನ) | ಕೆಎ-13-ಜಿ-202 | |

**ಷರತ್ತುಗಳು**

1. ಹರಾಜಿನಲ್ಲಿ ಭಾಗವಹಿಸುವುದಕ್ಕೆ ಮುಂಚಿತವಾಗಿ ಮೇಲ್ಕಂಡ ಸ್ಥಳದಲ್ಲಿರುವ ವಾಹನಗಳನ್ನು ಪರಿಶೀಲಿಸಬಹುದು.
2. ಕಪ್ಪು ಪಟ್ಟಿಯಲ್ಲಿರುವವರು, ದಿವಾಳಿಯಾದವರು ಬಾಕಿಯಾದವರು ಅಥವಾ ವಯಸ್ಕರಲ್ಲದವರು ಟೆಂಡರ್ ಅಥವಾ ಹರಾಜಿನಲ್ಲಿ ಭಾಗವಹಿಸಲು ಅರ್ಹರಾಗಿರುವುದಿಲ್ಲ.
3. ಹರಾಜಿನಲ್ಲಿ ಭಾಗವಹಿಸಲಿಚ್ಚಿಸುವವರು ಪ್ರತೀ ವಾಹನಕ್ಕೆ ರೂ. 10,000-00 (ಹತ್ತು ಸಾವಿರ ರೂಪಾಯಿಗಳು ಮಾತ್ರ) ಠೇವಣಿಯನ್ನು ಯಾವುದೇ ರಾಷ್ಟ್ರೀಕೃತ ಬ್ಯಾಂಕಿನಲ್ಲಿ ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ಅರಣ್ಯ ಸಂಚಾರಿ ದಳ, ಹಾಸನ ಇವರ ಹೆಸರಿಗೆ ತೆಗೆದುಕೊಂಡು ಡಿಮ್ಯಾಂಡ್ ಡ್ರಾಫ್ಟ್‌ನ್ನು ಟೆಂಡರ್ ಜೊತೆ ಲಗತ್ತಿಸಬೇಕು. ನಗದು ಹಣವನ್ನು ಸ್ವೀಕರಿಸುವುದಿಲ್ಲ.
4. ಬಹಿರಂಗ ಹರಾಜು ಪ್ರಾರಂಭವಾಗುವುದಕ್ಕೆ ಮೊದಲು ಟೆಂಡರ್ ಸ್ವೀಕರಿಸಲಾಗುವುದು ಮತ್ತು ಬಹಿರಂಗ ಹರಾಜಿನ ನಂತರ ಟೆಂಡರುಗಳನ್ನು ತೆಗೆಯಲಾಗುವುದು.
5. ಟೆಂಡರನ್ನು ನಿಗಧಿತ ಟೆಂಡರ್ ಪತ್ರದಲ್ಲಿಯೇ ಸಲ್ಲಿಸಬೇಕು, ಟೆಂಡರ್ ನಮೂನೆಯನ್ನು ರೂ. 250-00 (ತೆರಿಗೆಗಳು ಸೇರಿ) ನಗದು ಕೊಟ್ಟು ಕಛೇರಿಯ ವೇಳೆಯಲ್ಲಿ ಪಡೆಯಬಹುದಾಗಿದೆ. ನಿಗದಿತ ಟೆಂಡರ್ ನಮೂನೆ ಪತ್ರವನ್ನು ದಿನಾಂಕ:23.1.2008 ರಂದು ಬೆಳಿಗ್ಗೆ 11-00 ಗಂಟೆವರೆಗೆ ನೀಡಲಾಗುವುದು. ಪಡೆದ ನಿಗಧಿತ ನಮೂನೆ ಪತ್ರವನ್ನು ವರ್ಗಾಯಿಸುವುದಿಲ್ಲ.
6. ಟೆಂಡರ್ ಅಥವಾ ಹರಾಜಿನಲ್ಲಿ ಯಶಸ್ವಿಯಾದವರು ಸ್ವೀಕೃತಿ ಪತ್ರ ತಮಗೆ ತಲುಪಿದ (ಹತ್ತು) ದಿನಗಳೊಳಗೆ ಪೂರ್ಣ ಹಣ ಪಾವತಿಸಬೇಕು. ಇಲ್ಲದಿದ್ದಲ್ಲಿ ಶೇ. 18 (18%) ರಷ್ಟು ಬಡ್ಡಿಯನ್ನು ವಸೂಲಿ ಮಾಡಲಾಗುವುದು.
7. ಟೆಂಡರ್ ಅಥವಾ ಹರಾಜಿನ ದಿನವು ಸರ್ಕಾರಿ ರಜಾ ದಿನವಾದಲ್ಲಿ ಮಾರನೆಯ ಕೆಲಸದ ದಿನದಂದು ಟೆಂಡರ್ ಯಾ ಹರಾಜನ್ನು ನಡೆಸಲಾಗುವುದು.
8. ಉಪ ಅರಣ್ಯ ಸಂರಕ್ಷಣಾಧಿಕಾರಿ, ಅರಣ್ಯ ಸಂಚಾರಿ ದಳ, ಹಾಸನ ಅಥವಾ ಅಪರ ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿಗಳು (ಜಾಗೃತ) ಬೆಂಗಳೂರು ಇವರು ಟೆಂಡರ್ : ಹರಾಜಿನ ಸವಾಲನ್ನು ಯಾವ ಕಾರಣವೂ ನಮೂದಿಸದೇ ಅಂಗೀಕರಿಸುವ ಅಥವಾ ತಿರಸ್ಕರಿಸುವ ಹಕ್ಕು ಹೊಂದಿರುತ್ತಾರೆ.
9. ಯಶಸ್ವಿಯಾದ ಟೆಂಡರ್‌ದಾರರು ಅಥವಾ ಬಿಡ್ಡುದಾರರು ಸವಾಲಿನ ಮೊಬಲಗಿನ ಮೇಲೆ ಶೇ 12.50 (12.50%) ವ್ಯಾಟ್ ತೆರಿಗೆಯನ್ನು (ಅಥವಾ ಹರಾಜು ದಿನದಂದು ವಿಧಿಸಬಹುದಾದ ವ್ಯಾಟ್ ತೆರಿಗೆಯನ್ನು) ಹಾಗೂ ಪ್ರಸ್ತುತ ಚಾಲ್ತಿಯಲ್ಲಿರುವ ಆದಾಯ ತೆರಿಗೆಯನ್ನು ಪಾವತಿಸಬೇಕು.
10. ಬಿಡ್ಡು ಮಾಡಿದ ಕೂಡಲೇ ಅತೀ ಹೆಚ್ಚಿನ ಕ್ರಯದಾರರು ಅಥವಾ ಅತೀ ಹೆಚ್ಚಿನ ಟೆಂಡರುದಾರರು ಕ್ರಯದ ಅರ್ಧ ಭಾಗ ಹಣ ಮತ್ತು ಕ್ರಯದ ಮೌಲ್ಯದ ಮೇಲೆ ವಿಧಿಸುವ ಎಲ್ಲಾ ತೆರಿಗೆಗಳನ್ನು ಮಾರಾಟದ ದಿನವೇ ಸಲ್ಲಿಸಬೇಕು. ಪಾವತಿ ಮಾಡದೇ ಇದ್ದ ಪಕ್ಷದಲ್ಲಿ ಠೇವಣಿ ಹಣವನ್ನು ಮುಟ್ಟುಗೋಲು ಹಾಕಿಕೊಳ್ಳಲಾಗುವುದು ಮತ್ತು ವಾಹನಗಳನ್ನು ಮೂಲ ಕ್ರಯದಾರರ ಖರ್ಚು ಹಾಗೂ ಜವಾಬ್ದಾರಿಯಲ್ಲಿ ಪುನರ್ ಮಾರಾಟ ಮಾಡಲಾಗುವುದು.

11. ಹೆಚ್ಚಿನ ವಿವರಗಳನ್ನು ಈ ಕಚೇರಿಯ ಕೆಲಸದ ವೇಳೆಯಲ್ಲಿ ಈ ಕಚೇರಿಯಲ್ಲಿ ತಿಳಿಯಬಹುದು.
12. ಕ್ರಯದಾರರು ವಾಹನವನ್ನು ತಮ್ಮ ಜವಾಬ್ದಾರಿ ಮತ್ತು ತಮ್ಮ ಖರ್ಚಿನಲ್ಲಿಯೇ ತಮ್ಮ ಹೆಸರಿಗೆ ನೋಂದಾಯಿಸಲು / ಮಾರ್ಪಡಿಸಲು ಸಂಬಂಧಪಟ್ಟ ಪ್ರಾದೇಶಿಕ ಸಾರಿಗೆ ಅಧಿಕಾರಿಗಳಿಂದ ದಾಖಲಾತಿಗಳನ್ನು ಪಡೆದು ವರ್ಗಾಯಿಸಿಕೊಳ್ಳಲು ಕ್ರಮ ತೆಗೆದುಕೊಳ್ಳುವುದು. ಅದಕ್ಕೆ ಕ್ರಯದಾರರೇ ಜವಾಬ್ದಾರರಾಗಿರುತ್ತಾರೆ.
13. ಮೇಲ್ಕಂಡ ಟೆಂಡರ್ ಯಾ ಹರಾಜಿನ ಬಗ್ಗೆ ಉಪ ಅರಣ್ಯ ಸಂರಕ್ಷಣಾಧಿಕಾರಿ, ಅರಣ್ಯ ಸಂಚಾರಿ ದಳ, ಹಾಸನ ಅಥವಾ ಅಪರ ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿಗಳು (ಜಾಗೃತ) ಬೆಂಗಳೂರುರವರ ತೀರ್ಮಾನವೇ ಅಂತಿಮವಾಗಿರುವುದು.
14. ಪ್ರತೀ ವಾಹನಕ್ಕೂ ಪ್ರತ್ಯೇಕವಾಗಿ ಮುಂಗಡ ಹಣವನ್ನು ಕೊಡತಕ್ಕದ್ದು (ಇದೂ ಒಂದಕ್ಕಿಂತ ಹೆಚ್ಚು ಯಶಸ್ವಿ ಬಿಡ್ಡುದಾರರಿಗೆ ಮಾತ್ರ ಅನ್ವಯವಾಗತಕ್ಕದ್ದು)

**ಸಿ.ಜಡ್. ಸೈಯದ್ ಗಫಾರ್**

ಪಿ.ಆರ್. 751

ಅಧಿಕಾರಿಯುತ ಅಧಿಕಾರಿ ಹಾಗೂ
ಉಪ ಅರಣ್ಯ ಸಂರಕ್ಷಣಾಧಿಕಾರಿ, ಅರಣ್ಯ ಸಂಚಾರಿ ದಳ, ಹಾಸನ.

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ

### ಟೆಂಡರ್ ಪ್ರಕಟಣೆ

**ಸಂಖ್ಯೆ: ಸಿಆಸುಇ 19 ಡಿಎಫ್‌ಆರ್ 2007, ಬೆಂಗಳೂರು, ದಿನಾಂಕಃ 30ನೇ ನವೆಂಬರ್ 2007**

ಕರ್ನಾಟಕ ಸರ್ಕಾರ ಸಚಿವಾಲಯದಲ್ಲಿರುವ ಹಳೆಯ ಹದಿನೈದು ಸೋಫಾಸೆಟ್‌ಗಳ ಅಪ್‌ಹೋಲ್‌ಸ್ಟ್ರೀ ಮಾಡಿಸಲು ಉದ್ದೇಶಿಸಲಾಗಿದ್ದು, ಈ ಸಂಬಂಧ ತಯಾರಕರು ಅಥವಾ ಅವರ ಅಧಿಕೃತ ಮಾರಾಟಗಾರರಿಂದ ಮೊಹರಾದ ಟೆಂಡರ್‌ಗಳನ್ನು ಆಹ್ವಾನಿಸಲಾಗಿದೆ.

ಇಚ್ಛೆಯುಳ್ಳವರು ಸರ್ಕಾರದ ಅಧೀನ ಕಾರ್ಯದರ್ಶಿ, ಸಿ.ಆ.ಸು.ಇಲಾಖೆ (ಲೆಕ್ಕಪತ್ರ), ವಿಧಾನಸೌಧ, ಬೆಂಗಳೂರು – 560 001 ಇವರ ಹೆಸರಿನಲ್ಲಿ ರೂ. 100.00 + 12.50 ರಂತೆ ಮೌಲ್ಯವರ್ಧಿತ ತೆರಿಗೆ ಒಟ್ಟು ರೂ. 112.50 ಅಂದರೆ ರೂ.113.00 ಗಳಿಗೆ ಡಿಮ್ಯಾಂಡ್ ಢ್ರಾಫ್ಟ್‌ನ್ನು ನೀಡಿ ಟೆಂಡರ್ ನಮೂನೆಯನ್ನು ಸರ್ಕಾರದ ಅಧೀನ ಕಾರ್ಯದರ್ಶಿ, ಸಿ.ಆ.ಸು.ಇಲಾಖೆ (ಕಾರ್ಯಕಾರಿ), ಕೊಠಡಿ ಸಂಖ್ಯೆ: 23, ನೆಲಮಹಡಿ, ವಿಧಾನಸೌಧ, ಬೆಂಗಳೂರು – 560 001 ಇಲ್ಲಿ ಪಡೆದುಕೊಳ್ಳಬಹುದು. ದಿನಾಂಕಃ 22–12–2007 ರಂದು ಮಧ್ಯಾಹ್ನ 3:30 ಗಂಟೆಯವರೆಗೆ ಟೆಂಡರ್ ಅರ್ಜಿಗಳನ್ನು ನೀಡಲಾಗುವುದು. ಈ ಟೆಂಡರ್ ನಮೂನೆಗೆ ನೀಡಿದ ಮೊತ್ತವನ್ನು ಯಾವುದೇ ಕಾರಣಕ್ಕೂ ಹಿಂದಿರುಗಿಸಲಾಗುವುದಿಲ್ಲ.

ಟೆಂಡರ್‌ಗಳನ್ನು ಸಲ್ಲಿಸಲು ಕೊನೆಯ ದಿನಾಂಕಃ 29–12–2007 ರಂದು ಮಧ್ಯಾಹ್ನ 3:30 ಗಂಟೆವರೆಗೆ ನಂತರ ಬಂದ ಟೆಂಡರ್ ಅರ್ಜಿಗಳನ್ನು ಪರಿಗಣಿಸಲಾಗುವುದಿಲ್ಲ.

ಟೆಂಡರ್‌ಗಳನ್ನು ಟೆಂಡರ್ ಬುಲಿಟಿನ್ ಅಧಿಕಾರಿಯವರು ಕೊಠಡಿ ಸಂಖ್ಯೆ: 23, ವಿಧಾನಸೌಧ, ಬೆಂಗಳೂರು – 560 001 ಇಲ್ಲಿ ಟೆಂಡರ್‌ದಾರರ ಸಮ್ಮುಖದಲ್ಲಿ ದಿನಾಂಕಃ 02–01–2008 ರಂದು ಮಧ್ಯಾಹ್ನ 4:30 ಗಂಟೆಗೆ ತೆರೆಯಲಾಗುವುದು. ಟೆಂಡರ್ ತೆರೆಯುವ ದಿನಾಂಕವು ಯಾವುದಾದರೂ ಸಾರ್ವತ್ರಿಕ ರಜಾ ದಿನವಾದಲ್ಲಿ ಮಾರನೆಯ ಕೆಲಸದ ದಿನ ಅದೇ ವೇಳೆ ಮತ್ತು ಅದೇ ಸ್ಥಳದಲ್ಲಿ ತೆರೆಯಲಾಗುವುದು.

1. ಟೆಂಡರ್ ಅರ್ಜಿಗಳನ್ನು ಈ ಕಚೇರಿಯಿಂದಲೇ ಖರೀದಿಸಿ ದ್ವಿಪ್ರತಿಯಲ್ಲಿ ಸಲ್ಲಿಸತಕ್ಕದ್ದು.
2. ಮುಂಗಡ ಠೇವಣಿ (ಇ.ಎಂ.ಡಿ) ಮೊತ್ತ ರೂ. 5000.00 ಗಳ ಬ್ಯಾಂಕ್ ಡಿಮ್ಯಾಂಡ್ ಡ್ರಾಫ್ಟ್‌ನ್ನು ಸರ್ಕಾರದ ಅಧೀನ ಕಾರ್ಯದರ್ಶಿ, ಸಿ.ಆ.ಸು.ಇಲಾಖೆ (ಲೆಕ್ಕಪತ್ರ), ವಿಧಾನಸೌಧ, ಬೆಂಗಳೂರು – 560 001 ಇವರ ಹೆಸರಿನಲ್ಲಿ ಟೆಂಡರ್ ಅರ್ಜಿಯೊಂದಿಗೆ ಲಗತ್ತಿಸತಕ್ಕದ್ದು. ಬ್ಯಾಂಕ್ ಡಿಮ್ಯಾಂಡ್ ಡ್ರಾಫ್ಟ್‌ನ್ನು ಲಗತ್ತಿಸಿರದ ಟೆಂಡರ್‌ಗಳನ್ನು ತಿರಸ್ಕರಿಸಲಾಗುವುದು.
3. ದರಪಟ್ಟಿಯೊಂದಿಗೆ ದಿನಾಂಕ 31–03–2007ಕ್ಕೆ ಅಂತ್ಯಗೊಂಡಂತೆ ಅನ್ವಯಿಸುವ ಮೌಲ್ಯವರ್ಧಿತ ತೆರಿಗೆ ಕ್ಲಿಯರೆನ್ಸ್ ಸರ್ಟಿಫಿಕೇಟ್‌ನ್ನು ಹಾಗೂ ಆದಾಯ ತೆರಿಗೆ ಪಾವತಿಸಿರುವ ಬಗ್ಗೆ ದಾಖಲೆಗಳನ್ನು ಸಲ್ಲಿಸತಕ್ಕದ್ದು.
4. ಸರಬರಾಜು ಮಾಡುವ ಸಾಮಗ್ರಿಗಳಿಗೆ 90 ದಿನಗಳವರೆಗಿನ ದರ ಸಿಂಧುತ್ವ ಇರಬೇಕು.

ಇನ್ನು ಹೆಚ್ಚಿನ ವಿವರಗಳಿಗೆ ಸರ್ಕಾರದ ಅಧೀನ ಕಾರ್ಯದರ್ಶಿ, ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಕಾರ್ಯಕಾರಿ) ಇವರನ್ನು ಕಚೇರಿ ವೇಳೆಯಲ್ಲಿ ಖುದ್ದಾಗಿ ಅಥವಾ ದೂರವಾಣಿ ಸಂಖ್ಯೆ: 22033440 ಅಥವಾ 22033487 ರಲ್ಲಿ ಸಂಪರ್ಕಿಸಬಹುದು.

**ಕೆ.ಎಸ್.ಮಂಜುನಾಥ್**
ಸರ್ಕಾರದ ಅಧೀನ ಕಾರ್ಯದರ್ಶಿ
ಸಿಆಸುಇ (ಕಾರ್ಯಕಾರಿ)

### ಟೆಂಡರ್ ನಮೂನೆ

ಟೆಂಡರ್ ನಮೂನೆ ಸಂಖ್ಯೆ:

ವಿಷಯ : ಕರ್ನಾಟಕ ಸರ್ಕಾರ ಸಚಿವಾಲಯದ ಹಳೆಯ ಸೋಫಾ ಸೆಟ್‌ಗಳನ್ನು ಅಪ್‌ಹೋಲ್‌ಸ್ಟ್ರೀ ಮಾಡುವ ಬಗ್ಗೆ.

| | | |
|---|---|---|
| ಟೆಂಡರ್‌ಗಳನ್ನು ಸಲ್ಲಿಸಬೇಕಾದ ವಿಳಾಸ | : | ಸರ್ಕಾರದ ಅಧೀನ ಕಾರ್ಯದರ್ಶಿ<br>ಸಿ.ಆ.ಸು.ಇಲಾಖೆ (ಕಾರ್ಯಕಾರಿ)<br>ಕೊಠಡಿ ಸಂಖ್ಯೆ: 23, ವಿಧಾನಸೌಧ,<br>ಬೆಂಗಳೂರು – 560 001. |
| ಟೆಂಡರ್ ಸಲ್ಲಿಸಲು ಕೊನೆಯ ದಿನಾಂಕ | : | 29–11–2007 ಮಧ್ಯಾಹ್ನ 3:30 ಗಂಟೆಯೊಳಗೆ |
| ಟೆಂಡರ್ ತೆರೆಯುವ ದಿನಾಂಕ | : | 02–01–2008 ಮಧ್ಯಾಹ್ನ 4:30 ಗಂಟೆಗೆ.<br>ಟೆಂಡರ್ ತೆರೆಯುವ ದಿನಾಂಕವು<br>ಯಾವುದಾದರೂ ಸಾರ್ವತ್ರಿಕ ರಜಾ<br>ದಿನವಾದಲ್ಲಿ ಮಾರನೆಯ ಕೆಲಸದ ದಿನ<br>ಅದೇ ವೇಳೆ ಮತ್ತು ಅದೇ ಸ್ಥಳದಲ್ಲಿ ತೆರೆಯಲಾಗುವುದು. |
| ಟೆಂಡರ್ ಫಾರಂ ದರ | : | ರೂ. 100.00 + ಶೇಕಡ 12.5 ಮೌಲ್ಯವರ್ಧಿತ ತೆರಿಗೆ<br>(ರೂಪಾಯಿ ಒಂದು ನೂರ ಹದಿಮೂರು ಮಾತ್ರ) |

**ಟೆಂಡರ್‌ದಾರರ ಗಮನಕ್ಕೆ:**

1) ಟೆಂಡರ್ ಲಕೋಟೆಯ ಮೇಲೆ "ಹಳೆಯ ಸೋಫಾ ಸೆಟ್‌ಗಳ ಅಪ್‌ಹೋಲ್‌ಸ್ಟ್ರೀ ಮಾಡಲು ದರಪಟ್ಟಿ" ಎಂದು ಹಾಗೂ ಟೆಂಡರ್ ಪ್ರಕಟಣೆಯ ಸಂಖ್ಯೆ, ದಿನಾಂಕವನ್ನು ಕಡ್ಡಾಯವಾಗಿ ಬರೆಯತಕ್ಕದ್ದು.
2) ದರಗಳನ್ನು ಇದರೊಂದಿಗೆ ಲಗತ್ತಿಸಿರುವ ಅನುಬಂಧದ ನಮೂನೆಯಲ್ಲಿಯೇ ನೀಡತಕ್ಕದ್ದು.
3) ಸಂಸ್ಥೆಯು ಇದರೊಂದಿಗೆ ಲಗತ್ತಿಸಿರುವ ಮಾದರಿಯಂತೆ (Specification) ಸೋಫಾಸೆಟ್ ಅಪ್‌ಹೋಲ್‌ಸ್ಟ್ರೀ ಮಾಡಲು ದರಪಟ್ಟಿಯನ್ನು ಒದಗಿಸಬಹುದು.
4) ನಮೂದಿಸುವ ದರವು ತೆರಿಗೆ, ಸಾಗಾಣಿಕೆ ಇತ್ಯಾದಿಗಳನ್ನು ಒಳಗೊಂಡಿರಬೇಕು.
5) ದರಪಟ್ಟಿಯೊಂದಿಗೆ ದಿನಾಂಕ 31–03–2007ಕ್ಕೆ ಅಂತ್ಯಗೊಂಡಂತೆ ಅನ್ವಯಿಸುವ ಮೌಲ್ಯವರ್ಧಿತ ತೆರಿಗೆ ಕ್ಲಿಯರೆನ್ಸ್ ಸರ್ಟಿಫಿಕೇಟ್ ಹಾಗೂ ಆದಾಯ ತೆರಿಗೆ ಪಾವತಿಸಿರುವ ಬಗ್ಗೆ ದಾಖಲೆಗಳನ್ನು ಸಲ್ಲಿಸತಕ್ಕದ್ದು.
6) ಯಶಸ್ವಿ ಟೆಂಡರ್‌ದಾರರು ಗೊತ್ತುಪಡಿಸಿದ ದರದಲ್ಲಿಯೇ ಸೋಫಾ ಸೆಟ್‌ಗಳನ್ನು ಅಪ್‌ಹೋಲ್‌ಸ್ಟ್ರೀ ಮಾಡುವುದು ಮತ್ತು ಸರಬರಾಜು ಮಾಡಿದ ಈ ಸೋಫಾಗಳಿಗೆ ಒಂದು ವರ್ಷದ ಅವಧಿಯವರೆವಿಗೂ ವಾರಂಟಿಯನ್ನು ನೀಡತಕ್ಕದ್ದು.
7) ಒದಗಿಸುವ ಇಂತಹ ಸೋಫಾಸೆಟ್ ದೋಷದಿಂದ ಕೂಡಿದ್ದಲ್ಲಿ ಕೂಡಲೇ ಸರಿಪಡಿಸಿ ಕೊಡಲು ಬದ್ಧರಿರಬೇಕು.
8) ಸೋಫಾಸೆಟ್‌ಗಳನ್ನು ಅಪ್‌ಹೋಲ್‌ಸ್ಟ್ರೀ ಮಾಡಿ 15 ದಿನಗಳೊಳಗಾಗಿ ಒದಗಿಸಲು ಬದ್ಧರಿರಬೇಕು.
9) ಮುಂಗಡ ಠೇವಣಿ (ಇ.ಎಂ.ಡಿ) ಮೊತ್ತ ರೂ. 5000.00 ಗಳ ಬ್ಯಾಂಕ್ ಡಿಮ್ಯಾಂಡ್ ಡ್ರಾಫ್ಟ್‌ನ್ನು ಸರ್ಕಾರದ ಅಧೀನ ಕಾರ್ಯದರ್ಶಿ, ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಲೆಕ್ಕಪತ್ರ), ವಿಧಾನಸೌಧ, ಬೆಂಗಳೂರು – 560 001 ಇವರ ಹೆಸರಿನಲ್ಲಿ ಟೆಂಡರ್ ಅರ್ಜಿಯೊಂದಿಗೆ ಲಗತ್ತಿಸತಕ್ಕದ್ದು, ಬ್ಯಾಂಕ್ ಡಿಮ್ಯಾಂಡ್ ಡ್ರಾಫ್ಟ್‌ನ್ನು ಲಗತ್ತಿಸಿರದ ಟೆಂಡರ್‌ಗಳನ್ನು ತಿರಸ್ಕರಿಸಲಾಗುವುದು.
10) ಯಶಸ್ವಿ ಟೆಂಡರ್‌ದಾರರು ಸೋಫಾಸೆಟ್ ಅಪ್‌ಹೋಲ್‌ಸ್ಟ್ರೀ ಮಾಡುವ ಒಟ್ಟು ಮೌಲ್ಯದ ಶೇಕಡ 5 ರಷ್ಟು ಭದ್ರತಾ ಠೇವಣಿಯನ್ನು ಡಿ.ಡಿ. ರೂಪದಲ್ಲಿ ಸರ್ಕಾರದ ಅಧೀನ ಕಾರ್ಯದರ್ಶಿ, ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಲೆಕ್ಕಪತ್ರ), ವಿಧಾನಸೌಧ, ಬೆಂಗಳೂರು – 560 001 ಇವರ ಹೆಸರಿನಲ್ಲಿ ನೀಡತಕ್ಕದ್ದು.
11) ಯಶಸ್ವಿ ಟೆಂಡರ್‌ದಾರರ ಇ.ಎಂ.ಡಿ. ಮತ್ತು ಭದ್ರತಾ ಠೇವಣಿ ಮೊತ್ತವನ್ನು ಸೋಫಾಸೆಟ್ ಅಪ್‌ಹೋಲ್‌ಸ್ಟ್ರೀ ಮಾಡಿ ಸರಬರಾಜು ಮಾಡಿದ ಮೂರು ತಿಂಗಳ ನಂತರ ಷರತ್ತುಗಳ ಉಲ್ಲಂಘನೆ ಆಗಿರದಿದ್ದಲ್ಲಿ ಮಾತ್ರ ವಾಪಸ್ಸು ಮಾಡಲಾಗುವುದು. ಇದಕ್ಕೆ ಯಾವುದೇ ರೀತಿಯ ಬಡ್ಡಿಯನ್ನು ನೀಡಲಾಗುವುದಿಲ್ಲ.
12) ಅಯಶಸ್ವಿ ಟೆಂಡರ್‌ದಾರರ ಬ್ಯಾಂಕ್ ಡಿಮ್ಯಾಂಡ್ ಡ್ರಾಫ್ಟ್‌ನ್ನು ಹಿಂದಿರುಗಿಸಲಾಗುವುದು. ಅದಕ್ಕೆ ಯಾವುದೇ ರೀತಿಯ ಬಡ್ಡಿಯನ್ನು ನೀಡಲಾಗುವುದಿಲ್ಲ.
13) ಟೆಂಡರ್‌ಗಳನ್ನು ದಿನಾಂಕಃ 29–12–2007 ರಂದು ಮಧ್ಯಾಹ್ನ 3:30 ಗಂಟೆಯೊಳಗೆ ಸರ್ಕಾರದ ಅಧೀನ ಕಾರ್ಯದರ್ಶಿ, ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಕಾರ್ಯಕಾರಿ), ಕೊಠಡಿ ಸಂಖ್ಯೆ:23, ನೆಲಮಹಡಿ, ವಿಧಾನಸೌಧ, ಬೆಂಗಳೂರು–560 001 ಈ ಕಛೇರಿಗೆ ಸಲ್ಲಿಸತಕ್ಕದ್ದು, ನಂತರ ಬಂದ ಟೆಂಡರ್ ಅರ್ಜಿಗಳನ್ನು ಪರಿಗಣಿಸಲಾಗುವುದಿಲ್ಲ.
14) ದರಪಟ್ಟಿಯೊಂದಿಗೆ ಠೇವಣಿಯನ್ನು (ಇ.ಎಂ.ಡಿ.) ನೀಡದಿದ್ದಲ್ಲಿ ಮತ್ತು ಮೇಲಿನ ಅಂಶಗಳಿಗೆ ಪೂರ್ಣ ವಿವರವನ್ನು ನೀಡದಿದ್ದಲ್ಲಿ ಅಂತಹ ಟೆಂಡರ್ ಅರ್ಜಿಗಳನ್ನು ತಿರಸ್ಕರಿಸಲಾಗುವುದು.

ಯಾವುದೇ ಕಾರಣವನ್ನು ನೀಡದೇ ಯಾವುದೇ ಅಥವಾ ಎಲ್ಲಾ ಟೆಂಡರ್‌ಗಳನ್ನು ಸ್ವೀಕರಿಸುವ ಅಥವಾ ತಿರಸ್ಕರಿಸುವ ಹಕ್ಕನ್ನು ಸರ್ಕಾರವು ಕಾಯ್ದಿರಿಸಿಕೊಂಡಿದೆ.

**ಕೆ.ಎಸ್.ಮಂಜುನಾಥ್**
ಸರ್ಕಾರದ ಅಧೀನ ಕಾರ್ಯದರ್ಶಿ
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ
(ಕಾರ್ಯಕಾರಿ)

ಅನುಬಂಧ

ಟೆಂಡರ್ ಪ್ರಕಟಣೆ ಸಂಖ್ಯೆ:

ಸಚಿವಾಲಯದ ಸೋಫಾಸೆಟ್‌ಗಳ ಅಪ್‌ಹೋಲ್‌ಸ್ಟ್ರೀ ಮಾಡುವ ಬಗ್ಗೆ.

ಸಿಆಸುಇ 19 ಡಿಎಫ್‌ಆರ್ 2007

| ಕ್ರ.ಸಂ. | ಸಾಮಗ್ರಿ ವಿವರ | ದರ ಒಂದು ಸೆಟ್‌ಗೆ ರೂ. | ತೆರಿಗೆ |
|---|---|---|---|
| 1 | 2 | 3 | 4 |
| 1 | ಸೋಫಾಸೆಟ್ ಅಪ್ ಹೋಲ್‌ಸ್ಟ್ರೀ<br>Repairing of Sofa by changing the broken frames if any, replacing the 'U' foam with 'Sleep well' cushions for seat & back & reupholstring with 'Jacqyard' fabric . One sofa set 3+1+1 | | |

ಟೆಂಡರ್‌ದಾರರ ಸಹಿ

(ಪೂರ್ಣ ಹೆಸರು ವಿಳಾಸ ಮೊಹರಿನೊಂದಿಗೆ)

**ಕೆ.ಎಸ್.ಮಂಜುನಾಥ್**

ಸರ್ಕಾರದ ಅಧೀನ ಕಾರ್ಯದರ್ಶಿ

ಪಿ.ಆರ್. 771

ಸಿ.ಆ.ಸು.ಇ.(ಕಾರ್ಯಕಾರಿ)

## ನಿರ್ದೇಶಕರ ಕಛೇರಿ, ನ್ಯಾಯ ವಿಜ್ಞಾನ ಪ್ರಯೋಗಾಲಯಗಳು, ಮಡಿವಾಳ, ಬೆಂಗಳೂರು-68

### ಟೆಂಡರ್ ಪ್ರಕಟಣೆ

**ಸಂ. ಸಂಗ್ರಹ.1/ ನ್ಯಾವಿಪ್ರ/16756/2007-08, ದಿನಾಂಕ: 26ನೇ ನವೆಂಬರ್ 2007**

ಪೊಲೀಸ್ ಇಲಾಖೆಯ ನ್ಯಾಯ ವಿಜ್ಞಾನ ಪ್ರಯೋಗಾಲಯ, ಬೆಂಗಳೂರಿಗೆ ಅಗತ್ಯವಿರುವ ಈ ಕೆಳಗಿನ ಉಪಕರಣಗಳನ್ನು ಸರಬರಾಜು ಮಾಡಲು ಮೊಹರು ಮಾಡಿರುವ ದರಪಟ್ಟಿಗಳನ್ನು ಆಹ್ವಾನಿಸಲಾಗಿದೆ.

| Sl. No. | Name of the equipment | Quantity |
|---|---|---|
| 1. | Cold Storage units | 02 Nos. |
| 2. | Fuming Cupboard | 01 No. |
| 3. | Rate of Fire Recorder | 01 No. |
| 4. | Computerized Speech Lab | 01 No. |

**ಸೂಚನೆ:** ತಯಾರಿಕಾ ಘಟಕ / ರೆಪ್ಯೂಟೆಡ್ ಏಜೆಂಟ್ ಮತ್ತು ರೆಪ್ಯೂಟೆಡ್ ಕಂಪನಿಗಳಿಗೆ ಆದ್ಯತೆ ನೀಡಲಾಗುವುದು.

ಟೆಂಡರ್ ಅರ್ಜಿಗಳನ್ನು ಹಾಗೂ ಪ್ರತಿಯೊಂದು ಉಪಕರಣದ ನಿರ್ದಿಷ್ಟತೆ / ವಿಶಿಷ್ಟತೆಯ ಮೂಲಕ (specification) ದಿನಾಂಕ: 03.12.2007 ರಿಂದ 22.12.2007 ರವರೆಗೆ ಕೆಲಸಗಳ ದಿನದಂದು ಬೆಳಿಗ್ಗೆ 10.00 ಗಂಟೆಯಿಂದ ಸಾಯಂಕಾಲ 4.00 ಗಂಟೆಯೊಳಗೆ ಈ ಕಛೇರಿಯಲ್ಲಿ ಪಡೆಯಬಹುದು. ಪ್ರತಿ ಟೆಂಡರ್ ಅರ್ಜಿ ನಮೂನೆಯ ಬೆಲೆ ರೂ. 200 + 25.00 (ತೆರಿಗೆ) = ರೂ. 225.00ಗಳನ್ನು ನಗದು ಅಥವಾ ಡಿ.ಡಿ. ಮೂಲಕ ಮಾತ್ರ ಪಾವತಿಸಬಹುದಾಗಿದೆ (ಮನಿಯಾರ್ಡರ್‌ನಲ್ಲಿ ಪಾವತಿಸಿದರೆ ತಿರಸ್ಕರಿಸಲಾಗುವುದು). ಟೆಂಡರ್ ಅರ್ಜಿಯನ್ನು ಅಂಚೆಯ ಮೂಲಕ ಪಡೆಯಲು ಇಚ್ಛಿಸುವವರು ರೂ. 100.00 + 13.00 (ತೆರಿಗೆ) = ರೂ. 113.00 ಗಳಿಗೆ ಹೆಚ್ಚುವರಿ ಡಿ.ಡಿ.ಯನ್ನು ನಿರ್ದೇಶಕರು, ನ್ಯಾಯ ವಿಜ್ಞಾನ ಪ್ರಯೋಗಾಲಯ, ಮಡಿವಾಳ, ಬೆಂಗಳೂರು ರವರ ಹೆಸರಿನಲ್ಲಿ ಪಡೆದು ಕಳುಹಿಸಲು ಕೋರಲಾಗಿದೆ. ಭರ್ತಿ ಮಾಡಿದ ದ್ವಿಪ್ರತಿ ಟೆಂಡರ್ ಅರ್ಜಿ ನಮೂನೆಗಳನ್ನು ಹಾಗೂ ಶೇಕಡ 2ರಷ್ಟು ಇ.ಎಂ.ಡಿಯ (ಒಟ್ಟು ಮೌಲ್ಯಕ್ಕೆ) ಮುಂಗಡ ಠೇವಣಿಯನ್ನು ನಿರ್ದೇಶಕರು, ನ್ಯಾಯ ವಿಜ್ಞಾನ ಪ್ರಯೋಗಾಲಯ, ಬೆಂಗಳೂರು ರವರ ಹೆಸರಿನಲ್ಲಿ ಪಡೆದ ಡಿ.ಡಿ. / ಬ್ಯಾಂಕ್ ಗ್ಯಾರಂಟಿ ಹಾಗೂ ಮಾದರಿಯ ಬ್ರೋಚರ್ಸ್, ಕ್ಯಾಟ್ಲಾಗ್ಸ್ ವಿತ್ ಟೆಕ್ನಿಕಲ್ ಸ್ಪೆಸಿಫಿಕೇಷನ್, ಮತ್ತು ಇತರೆ ಸಂಬಂಧಪಟ್ಟ ದಾಖಲಾತಿಗಳೊಂದಿಗೆ ಈ ಕಛೇರಿಯ ಡಾ: ಬಿ.ಎಂ. ಮೋಹನ್, ನಿರ್ದೇಶಕರು, ನ್ಯಾಯ ವಿಜ್ಞಾನ ಪ್ರಯೋಗಾಲಯ, ಮಡಿವಾಳ, ಬೆಂಗಳೂರು-68 ರವರಿಗೆ ಹೆಸರಿಸಿ ದಿನಾಂಕ:01.01.2008ರ 4.00 ಸಂಜೆ ಗಂಟೆಯೊಳಗೆ ಸಲ್ಲಿಸತಕ್ಕದ್ದು. ಈ ದಿನಾಂಕದ ನಂತರ ಬಂದಂತಹ ಟೆಂಡರ್‌ಗಳನ್ನು ಅಂಗೀಕರಿಸಲಾಗುವುದಿಲ್ಲ. ಲಕೋಟೆಯ ತುದಿಯಲ್ಲಿ "ನ್ಯಾಯ ವಿಜ್ಞಾನ ಪ್ರಯೋಗಾಲಯಕ್ಕೆ ಬೇಕಾಗಿರುವ ಉಪಕರಣಗಳನ್ನು ಸರಬರಾಜು ಮಾಡುವ ಬಗ್ಗೆ ಅರ್ಜಿ" ಎಂದು ನಮೂದಿಸಿರಬೇಕು ಹಾಗೂ ಲಕೋಟೆಯು ಸರಬರಾಜು ಮಾಡಲು ಬಯಸುವ ಸಂಸ್ಥೆಯ ವಿಳಾಸವನ್ನು ಒಳಗೊಂಡಿರಬೇಕು.

ಸ್ವೀಕರಿಸಿದ ಟೆಂಡರ್‌ಗಳನ್ನು ದಿನಾಂಕ: 02.01.2008 ರಂದು ಬೆಳಿಗ್ಗೆ 11.00 ಗಂಟೆಗೆ ಹೆಚ್ಚುವರಿ ಪೊಲೀಸ್ ಮಹಾ ನಿರ್ದೇಶಕರು, ಅಪರಾಧ, ತಾಂತ್ರಿಕ ಸೇವೆಗಳು ಮತ್ತು ಆಂತರಿಕ ಭದ್ರತೆ, ಪೊಲೀಸ್ ಪ್ರಧಾನ ಕಛೇರಿ, ನೃಪತುಂಗ ರಸ್ತೆ, ಬೆಂಗಳೂರು-01 ಇಲ್ಲಿ ತೆರೆಯಲಾಗುವುದು. ಇಚ್ಛೆಯುಳ್ಳ ಟೆಂಡರ್‌ದಾರರು ಟೆಂಡರ್‌ಗಳನ್ನು ತೆರೆಯುವ ಕಾರ್ಯಕ್ರಮದಲ್ಲಿ ಭಾಗವಹಿಸಲು ಅವಕಾಶ ನೀಡಲಾಗುವುದು.

ಇ.ಎಂ.ಡಿ.ಯನ್ನು ಡಿಮ್ಯಾಂಡ್ ಡ್ರಾಫ್ಟ್ / ಬ್ಯಾಂಕ್ ಗ್ಯಾರಂಟಿ ಮೂಲಕ ಪಾವತಿಸದಿದ್ದರೆ ಅಂತಹ ಅರ್ಜಿಗಳನ್ನು ತಿರಸ್ಕರಿಸಲಾಗುವುದು ಮತ್ತು ಟೆಂಡರ್‌ದಾರರು ಅಂಚೆ ಮೂಲಕ / ಕೊರಿಯರ್ ಮೂಲಕ ಕಳುಹಿಸುವ ಟೆಂಡರ್ ಅರ್ಜಿ ಮತ್ತು ದಾಖಲಾತಿಗಳು ತಡವಾಗಿ ತಲುಪಿದಲ್ಲಿ / ನಾಶವಾದಲ್ಲಿ ಇಲಾಖೆಯು ಜವಾಬ್ದಾರವಲ್ಲ. ಇಲಾಖೆಯು ಯಾವುದೇ ಕಾರಣವನ್ನು ನೀಡದೆ ಟೆಂಡರನ್ನು ಸಾರಾಸಗಟವಾಗಿ / ಭಾಗಶಃ ಒಪ್ಪಿಕೊಳ್ಳುವ, ಹೆಚ್ಚು ಅಥವಾ ಕಡಿಮೆ ಮಾಡುವ ಅಥವಾ ತಿರಸ್ಕರಿಸುವ ಹಕ್ಕನ್ನು ಕಾಯ್ದಿರಿಸಿದೆ.

ನಿರ್ದೇಶಕರು,

ಪಿ.ಆರ್. 763

ನ್ಯಾಯ ವಿಜ್ಞಾನ ಪ್ರಯೋಗಾಲಯಗಳು, ಬೆಂಗಳೂರು.

## ದಾವಣಗೆರೆ–ಹರಿಹರ ನಗರಾಭಿವೃದ್ಧಿ ಪ್ರಾಧಿಕಾರ, ದಾವಣಗೆರೆ

## ಶ್ರೀ ಡಿ. ದೇವರಾಜ ಅರಸು, ಬಡಾವಣೆ, "ಎ" ಬ್ಲಾಕ್, ಪಿ.ಬಿ. ರಸ್ತೆ, ದಾವಣಗೆರೆ – 577 006

ಸಂಖ್ಯೆ.ದಾನಪ್ರಾ:ತಾಶಾ:02:ಟೆಂಪ್ರ:01:2007–08, ದಿನಾಂಕ: 1ನೇ ಡಿಸೆಂಬರ್ 2007

### "ಟೆಂಡರ್ ಪ್ರಕಟಣೆ (ಎರಡು ಲಕೋಟೆ ಬಿಡ್ ಪದ್ಧತಿ)"

ಆಯುಕ್ತರು, ದಾವಣಗೆರೆ–ಹರಿಹರ ನಗರಾಭಿವೃದ್ಧಿ ಪ್ರಾಧಿಕಾರ, ಶ್ರೀ ಡಿ. ದೇವರಾಜ್ ಅರಸು ಬಡಾವಣೆ, "ಎ" ಬ್ಲಾಕ್, ಪಿ.ಬಿ. ರಸ್ತೆ, ದಾವಣಗೆರೆ ಇವರು ವಿದ್ಯುತ್ ಇಲಾಖೆಯಲ್ಲಿ ನೊಂದಾಯಿತ ಒಂದನೇ ದರ್ಜೆ ಗುತ್ತಿಗೆದಾರರುಗಳಿಂದ ಈ ಕೆಳಗೆ ನಮೂದಿಸಿರುವ ಕಾಮಗಾರಿಗೆ ಮೊಹರಾದ ಐಟಂವಾರು ಟೆಂಡರುಗಳನ್ನು ದ್ವಿಪ್ರತಿಯಲ್ಲಿ ಆಹ್ವಾನಿಸಲಾಗಿದೆ (ಒಂದು ಲಕೋಟೆ ತಾಂತ್ರಿಕ ಬಿಡ್ ಮತ್ತು ಎರಡನೇ ಲಕೋಟೆ ಫೈನಾನ್ಸಿಯಲ್ ಬಿಡ್ ಇರುತ್ತದೆ).

1. ಟೆಂಡರ್ ಫಾರಂಗೆ ಅರ್ಜಿ ನೀಡಲು (ನಿಗದಿತ ಇ.ಎಂ.ಡಿ. ಹಾಗೂ ಟೆಂಡರ್ ಫಾರಂ ಬೆಲೆಯೊಂದಿಗೆ) ಕೊನೆಯ ದಿನಾಂಕ: 5.1.2008ರ ಸಂಜೆ 4.00 ಗಂಟೆವರೆಗೆ
2. ಖಾಲಿ ಟೆಂಡರ್ ಫಾರಂಗಳನ್ನು ವಿತರಿಸುವ ದಿನಾಂಕ: 7.1.2008ರ ಸಂಜೆ 4.00 ಗಂಟೆವರೆಗೆ
3. ಬಿಡ್ ಪೂರ್ವ ಮಿಟಿಂಗ್ ದಿನಾಂಕ: 8.1.2008 ರಂದು ಬೆಳಿಗ್ಗೆ 11.00 ಗಂಟೆಗೆ ಸ್ಥಳ: ಸಹಾಯಕ ಕಾರ್ಯಪಾಲಕ ಅಭಿಯಂತರರು, ದಾವಣಗೆರೆ–ಹರಿಹರ ನಗರಾಭಿವೃದ್ಧಿ ಪ್ರಾಧಿಕಾರ, ದಾವಣಗೆರೆ ಇವರ ಕೊಠಡಿಯಲ್ಲಿ.
4. ಭರ್ತಿ ಮಾಡಿದ ಟೆಂಡರ್ ಸಲ್ಲಿಸುವ ದಿನಾಂಕ: 9.1.2008ರ ಸಂಜೆ 4.00 ಗಂಟೆವರೆಗೆ.
5. ತಾಂತ್ರಿಕ ಬಿಡ್ ತೆರೆಯುವ ದಿನಾಂಕ 9.1.2008ರ ಸಂಜೆ 4.30 ಗಂಟೆ ನಂತರ.
6. ಆರ್ಥಿಕ ಬಿಡ್ ತೆರೆಯುವ ದಿನಾಂಕ: 10.1.2008 ರಂದು ಬೆಳಿಗ್ಗೆ 11.30 ಗಂಟೆ ನಂತರ.

ಟೆಂಡರ್ ಫಾರಂ ಬೆಲೆಯನ್ನು (ಹಿಂದಿರುಗಿಸುವುದಿಲ್ಲ) ಹಾಗೂ ಇ.ಎಂ.ಡಿ. ಯ ಮೊತ್ತವನ್ನು ಆಯುಕ್ತರು, ದಾವಣಗೆರೆ–ಹರಿಹರ ನಗರಾಭಿವೃದ್ಧಿ ಪ್ರಾಧಿಕಾರ, ದಾವಣಗೆರೆ ಇವರಿಗೆ ಪಾವತಿಯಾಗುವಂತೆ ಯಾವುದೇ ರಾಷ್ಟ್ರೀಕೃತ ಬ್ಯಾಂಕ್‌ನಿಂದ ಪಡೆದ ಡಿಮ್ಯಾಂಡ್ ಡ್ರಾಫ್ಟ್‌ನ್ನು ಅರ್ಜಿಯ ಜೊತೆಗೆ ಲಗತ್ತಿಸತಕ್ಕದ್ದು. ಮೊಹರು ಮಾಡಿದ ಟೆಂಡರುಗಳ ಲಕೋಟೆಯ ಮೇಲೆ ಕಾಮಗಾರಿಯ ಹೆಸರನ್ನು ಬರೆದಿರಬೇಕು.

| ಕ್ರ. ಸಂ. | ಕಾಮಗಾರಿಯ ಹೆಸರು | ಟೆಂಡರ್‌ಗೆ ಇಟ್ಟಿರುವ ಟೆಂಡರ್ ಮೊತ್ತ ರೂ.ಗಳಲ್ಲಿ | ಇ.ಎಂ.ಡಿ. ರೂ.ಗಳಲ್ಲಿ | ಟೆಂಡರ್ ಪತ್ರದ ಬೆಲೆ ರೂ.ಗಳಲ್ಲಿ | ಕೆಲಸ ಪೂರ್ಣ ಗೊಳಿಸುವ ಕಾಲಮಿತಿ | ಗುತ್ತಿಗೆದಾರರ ದರ್ಜೆ |
|---|---|---|---|---|---|---|
| 1. | ದಾವಣಗೆರೆ–ಹರಿಹರ ನಗರಾಭಿವೃದ್ಧಿ ಪ್ರಾಧಿಕಾರದಿಂದ ರಚಿಸಿರುವ ಶ್ರೀ ಜೆ.ಹೆಚ್. ಪಟೇಲ್ ಬಡಾವಣೆಯಲ್ಲಿ ವಿದ್ಯುತ್ತೀಕರಣ ಕಾಮಗಾರಿಯನ್ನು ನಿರ್ವಹಿಸುವುದು. (ಗ್ರಾಮಾಂತರ ಉಪ ವಿಭಾಗ ಓ ಅಂಡ್ ಎಂ ವ್ಯಾಪ್ತಿಗೆ ಒಳಪಡುವ) | 2,08,06,541–00 | 208065–00 | 20,000+ ತೆರಿಗೆ | 6 ತಿಂಗಳು (ಮಳೆಗಾಲ ಸೇರಿ) | 1 ದರ್ಜೆ |

**ಷರತ್ತುಗಳು:**

1. ಅರ್ಜಿಯೊಂದಿಗೆ ಲೈಸನ್ಸ್, ಕಾಮಗಾರಿ ನೆರವೇರಿಸಿರುವ ದೃಢೀಕರಣ ಪತ್ರ, ಆದಾಯ ತೀರುವಳಿ, ಇತರೆ ದಾಖಲೆ ಪತ್ರಗಳನ್ನು ಲಗತ್ತಿಸತಕ್ಕದ್ದು.
2. ಈ ಮೇಲಿನ ಕಾಮಗಾರಿಯ ಮೊತ್ತದ ಶೇ.90 ರಷ್ಟು (ರೂ.1,87,26,000–00ಗಳು) ಮೊತ್ತಕ್ಕೆ ಕಡಿಮೆ ಇರದಂತೆ ಇದೇ ಮಾದರಿಯ ಕನಿಷ್ಠ ಒಂದು ಕಾಮಗಾರಿಯನ್ನು ಕಳೆದ ಮೂರು ವರ್ಷದ ಅವಧಿಯಲ್ಲಿ ನಿರ್ವಹಿಸಿರತಕ್ಕದ್ದು. ಕೆಲಸ ನಿರ್ವಹಿಸಿದ ಬಗ್ಗೆ ಕಾರ್ಯ ಅರ್ಹತಾ ಪ್ರಮಾಣ ಪತ್ರವನ್ನು (Work done Certificate) ಹಾಜರುಪಡಿಸಬೇಕು. ಸದರಿ ಪ್ರಮಾಣ ಪತ್ರ ಹಾಜರುಪಡಿಸಿದಂತಹ ಗುತ್ತಿಗೆದಾರರು/ಸಂಸ್ಥೆಗಳಿಗೆ ಮಾತ್ರ ಟೆಂಡರ್ ಫಾರಂಗಳನ್ನು ನೀಡಲಾಗುವುದು.
3. ಕಳೆದ ಮೂರು ವರ್ಷಗಳ ಅವಧಿಯಲ್ಲಿ ಗುತ್ತಿಗೆದಾರರ ಆರ್ಥಿಕ ವಹಿವಾಟು ಕನಿಷ್ಠ ರೂ. 3.00 ಕೋಟಿ ಇರತಕ್ಕದ್ದು. ಕೆಲಸ ನಿರ್ವಹಿಸಿದ ಬಗ್ಗೆ ಕಾರ್ಯ ಅರ್ಹತಾ ಪ್ರಮಾಣ ಪತ್ರವನ್ನು ಹಾಜರ್‌ಪಡಿಸಬೇಕು.
4. ಯಾವುದೇ ಕಾರಣ ನೀಡದೆ ಅಥವಾ ಎಲ್ಲಾ ಟೆಂಡರ್‌ಗಳನ್ನು ಅಂಗೀಕರಿಸುವ / ತಿರಸ್ಕರಿಸುವ ಹಕ್ಕನ್ನು ಪ್ರಾಧಿಕಾರವು ಕಾಯ್ದಿರಿಸಿಕೊಂಡಿರುತ್ತದೆ.
5. ಮುಂದೆ ಬದಲಾಗಬಹುದಾದ ನಿಯಮಗಳಿಗೆ ಹಾಗೂ ಹೆಚ್ಚಿನ ಷರತ್ತುಗಳಿಗೆ ಬದ್ಧರಾಗಿರತಕ್ಕದ್ದು ಹಾಗೂ ಹೆಚ್ಚಿನ ವಿವರಗಳನ್ನು ಕೆಲಸದ ದಿನಗಳಲ್ಲಿ ಪ್ರಾಧಿಕಾರದ ಸಹಾಯಕ ಕಾರ್ಯಪಾಲಕ ಅಭಿಯಂತರರನ್ನು ಸಂಪರ್ಕಿಸಿ ಪಡೆಯಬಹುದಾಗಿದೆ.

ಆಯುಕ್ತರು,
ದಾ–ಹ ನಗರಾಭಿವೃದ್ಧಿ ಪ್ರಾಧಿಕಾರ, ದಾವಣಗೆರೆ.

ಪಿ.ಡಿ. 109

ವಾರ್ತಾ ಇಲಾಖೆ

2ನೇ ಮಹಡಿ, ಬಿ.ಎಂ.ಟಿ.ಸಿ. ಕಟ್ಟಡ, ಶಿವಾಜಿನಗರ ಬಸ್ ನಿಲ್ದಾಣ, ಬೆಂಗಳೂರು 560 051.

ಆದೇಶ ಸಂ: ವಾಇ/ಜಂ.ನಿ/ಕ್ಷೇ.ಪ್ರ/2007–08/610**A**, ದಿನಾಂಕ: 11ನೇ ಡಿಸೆಂಬರ್ 2007

**ವಿಷಯ:** ವಾರ್ತಾಸೌಧದ ಕಟ್ಟಡದ ಒಳಾಂಗಣ ವಿನ್ಯಾಸದ ಅಲ್ಪಾವಧಿ ಟೆಂಡರನ್ನು ರದ್ದುಗೊಳಿಸಿರುವ ಬಗ್ಗೆ.

**ಉಲ್ಲೇಖ:** 1. ಸರ್ಕಾರದ ಪತ್ರ ಸಂ:ಕಸಂವಾಪ್ರ 93 ವಾಪ್ರಸಿ 07, ದಿನಾಂಕ 10.12.2007.

2. ಸರ್ಕಾರದ ಪತ್ರ ಸಂ:ಕಸಂವಾಪ್ರ 93 ವಾಪ್ರಸಿ 07, ದಿನಾಂಕ 11.12.2007.

ನಂ. 17 ಇನ್‌ಫೆಂಟ್ರಿ ರಸ್ತೆಯಲ್ಲಿ ನೂತನವಾಗಿ ನಿರ್ಮಿಸಲಾಗಿರುವ **"ವಾರ್ತಾಸೌಧ"**ದಲ್ಲಿ ಮಾಡ್ಯುಲರ್ ವರ್ಕ್ ಸ್ಪೇಷನ್ಸ್ ಒಳಾಂಗಣ ಬಿಡಿಭಾಗಗಳು ಹಾಗೂ ಮಾಡ್ಯುಲರ್ ಪೀಠೋಪಕರಣಗಳನ್ನು ಅಳವಡಿಸಿ, ಸಜ್ಜುಗೊಳಿಸುವುದು ಇತ್ಯಾದಿ ಒಳಾಂಗಣ ಕಾರ್ಯಗಳನ್ನು ಅನುಷ್ಠಾನಗೊಳಿಸಲು ದಿನಾಂಕ 30–9–2007ರಂದು ಜಾಹೀರಾತು ನೀಡಿ, ಅರ್ಹ ಟೆಂಡರ್‌ದಾರರಿಂದ ದ್ವಿಲಕೋಟೆ ಪದ್ಧತಿಯಲ್ಲಿ ಟೆಂಡರ್‌ಗಳನ್ನು ಆಹ್ವಾನಿಸಲಾಗಿತ್ತು. ಅದರಂತೆ ದಿನಾಂಕ: 16–10–2007 ರಂದು ಬೆಳಿಗ್ಗೆ 11.45ಕ್ಕೆ ತಾಂತ್ರಿಕ ಬಿಡ್ಡುಗಳನ್ನು ಹಾಗೂ ಅದೇ ದಿನ ಅಪರಾಹ್ನ 3.00 ಗಂಟೆಗೆ ಆರ್ಥಿಕ ಬಿಡ್ಡುಗಳ ಟೆಂಡರ್ ಲಕೋಟೆಗಳನ್ನು ಟೆಂಡರ್‌ದಾರರ ಸಮ್ಮುಖದಲ್ಲಿ ತೆರೆಯಲಾಗಿರುತ್ತದೆ.

ಕರ್ನಾಟಕ ಸಾರ್ವಜನಿಕ ಸಂಗ್ರಹಣೆಯಲ್ಲಿ ಪಾರದರ್ಶಕ ನಿಯಮಗಳು 2000 ಅಧಿನಿಯಮದಡಿ ಅಧ್ಯಾಯ 5, ನಿಯಮ 20ರಡಿ ಟೆಂಡರ್ ದಸ್ತಾವೇಜುಗಳನ್ನು ಪರಿಶೀಲಿಸಲು, ಟೆಂಡರ್‌ಗಳನ್ನು ತೆರೆಯುವ ಬಗ್ಗೆ ಮೇಲ್ವಿಚಾರಣೆ ಮಾಡಲು, ಪ್ರಾರಂಭಿಕ ಪರೀಕ್ಷೆ ನಡೆಸಲು ಮತ್ತು ಸ್ವೀಕರಿಸಿದ ಟೆಂಡರ್‌ಗಳ ಸ್ವವಿವರವಾದ ಮೌಲ್ಯಮಾಪನ ಮಾಡಲು ಮತ್ತು ಟೆಂಡರ್ ಅಂಗೀಕರಿಸುವ ಪ್ರಾಧಿಕಾರದ ಪರಿಗಣನೆಗಾಗಿ ಮೌಲ್ಯಮಾಪನ ವರದಿಯನ್ನು ಸಿದ್ಧಪಡಿಸಲು ಟೆಂಡರ್ ಮೌಲ್ಯ ಮಾಪನ ಸಮಿತಿಯನ್ನು ಕಾರ್ಯದರ್ಶಿಗಳು, ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆ ಇವರ ಅಧ್ಯಕ್ಷತೆಯಲ್ಲಿ ಸರ್ಕಾರದ ಪತ್ರ ಸಂ: ಕಸಂವಾಪ್ರ 93, ವಾಪ್ರಸಿ 07, ಬೆಂಗಳೂರು ದಿನಾಂಕ: 9.10.2007ರಲ್ಲಿ ಮೌಲ್ಯಮಾಪನ ಸಮಿತಿಯನ್ನು ರಚಿಸಲಾಗಿರುತ್ತದೆ.

ಸದರಿ ಟೆಂಡರ್ ಮೌಲ್ಯ ಮಾಪನ ಸಮಿತಿಯು ದಿನಾಂಕ: 28.11.2007ರಂದು ಸಭೆ ಸೇರಿ, ವಾರ್ತಾಸೌಧದ ಒಳಾಂಗಣ ಕಾಮಗಾರಿಗೆ ಸಂಬಂಧಿಸಿದ ಆರ್ಥಿಕ ಬಿಡ್ಡುಗಳನ್ನು ಕೂಲಂಕುಷವಾಗಿ ಪರಿಶೀಲಿಸಿದ ನಂತರ ಸದರಿ ಕಾಮಗಾರಿಗೆ ಸಂಬಂಧಿಸಿದಂತೆ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮ 2002ರ ಕಾಯ್ದೆ 7 (ಬಿ) ರನ್ವಯ ಟೆಂಡರ್ ಬುಲೆಟಿನ್‌ನಲ್ಲಿ ಪ್ರಕಟಿಸಬೇಕಾಗಿರುವುದರಿಂದ ಈ ಹಿಂದೆ ಟೆಂಡರ್ ಕರೆದಿರುವುದನ್ನು ರದ್ದುಗೊಳಿಸಿ, ಹೊಸದಾಗಿ ಟೆಂಡರ್ ಕರೆಯುವ ಬಗ್ಗೆ ತ್ವರಿತವಾಗಿ ಕ್ರಮಕೈಗೊಳ್ಳುವಂತೆ ಉಲ್ಲೇಖಿತ (1)ರ ಸರ್ಕಾರದ ಪತ್ರದಲ್ಲಿ ತಿಳಿಸಲಾಗಿರುತ್ತದೆ.

ಆದ್ದರಿಂದ ಸರ್ಕಾರದ ಆದೇಶದಲ್ಲಿ ತಿಳಿಸಿರುವಂತೆ ವಾರ್ತಾಸೌಧದ ಒಳವಿನ್ಯಾಸದ ಕಾಮಗಾರಿಗಳಿಗೆ ಸಂಬಂಧಿಸಿದಂತೆ ಕರೆಯಲಾಗಿದ್ದ ಅಲ್ಪಾವಧಿ ಟೆಂಡರನ್ನು ತಕ್ಷಣದಿಂದಲೇ ರದ್ದುಪಡಿಸಲಾಗಿದೆ.

ಬಿಡ್ಡುದಾರರು ತಮ್ಮ ಇಎಂಡಿ ಮೊತ್ತವನ್ನು ಹಿಂದಕ್ಕೆ ಪಡೆಯುವಂತೆ ಸೂಚಿಸಲಾಗಿದೆ.

**ಕೆ.ವಿ.ಆರ್. ಠ್ಯಾಗೂರ್**
ಆಯುಕ್ತರು
ವಾರ್ತಾ ಇಲಾಖೆ

ಪಿ.ಆರ್. 788

**WATER RESOURCES DEPARTMENT**
**(Minor Irrigation)**

ಸಂಖ್ಯೆ:ಸನೀಇ 04 ಮಸಾವಿ 2007, ದಿನಾಂಕ: 29ನೇ ನವೆಂಬರ್ 2007

**STATE TENDER BULLETIN**

The details of the notices inviting the tender in respect of the Procurement requirement of different procurement entities to be published as a part of the State - Tender Bulletin for the 5th week of Nov 2007. The details of the published Tender Notification may be obtained from the concerned Executive Engineers who has invited the Tender.

**V. GOVINDARAJ**
State Tender Bulletin Officer and
Deputy Secretary to Government
Water Resources Department (M.I.)

**(ಜಲಸಂಪನ್ಮೂಲ ಇಲಾಖೆ - ಸಣ್ಣ ನೀರಾವರಿ)**

**ಕಾರ್ಯಪಾಲಕ ಅಭಿಯಂತರರವರ ಕಛೇರಿ, ಸಣ್ಣ ನೀರಾವರಿ ವಿಭಾಗ, ಬೆಂಗಳೂರು**

**ಟೆಂಡರ್ ಪ್ರಕಟಣೆ ಸಂಖ್ಯೆ: 13/2007-08, ದಿನಾಂಕ: 19ನೇ ನವೆಂಬರ್ 2007**

**(ಎರಡು ಲಕೋಟೆ ಪದ್ಧತಿ)**

ನಾಲ್ಕನೇ ಕರೆ

**ಸಂಖ್ಯೆ: ಸನೀವಿ/ಬೆಂ/ಪಿಬಿ/ರಾಮನಗರ/ಎ.ನೀ.ಯೋ/ಟೆಂಡರ್/2007-08/**

ಕರ್ನಾಟಕ ಸರ್ಕಾರದ ರಾಜ್ಯಪಾಲರ ಪರವಾಗಿ ಪಾರದರ್ಶಕ ಅಧಿನಿಯಮ 1999 ಮತ್ತು 2000 ರಂತೆ ಕರ್ನಾಟಕ ರಾಜ್ಯದ ಲೋಕೋಪಯೋಗಿ ಇಲಾಖೆಯಲ್ಲಿ ನೋಂದಾಯಿಸಿದ ಮೊದಲನೆ ದರ್ಜೆ ಗುತ್ತಿಗೆದಾರರಿಂದ ಕಾರ್ಯನಿರ್ವಾಹಕ ಅಭಿಯಂತರರು, ಸಣ್ಣ

ನೀರಾವರಿ ವಿಭಾಗ, ಬೆಂಗಳೂರು ಇವರಿಂದ ಎರಡು ಲಕೋಟೆ ಅಂದರೆ ತಾಂತ್ರಿಕ ಮತ್ತು ಆರ್ಥಿಕ ಬಿಡ್ ಪದ್ಧತಿಯಲ್ಲಿ ಐಟಂ ರೇಟ್ ಟೆಂಡರ್‌ನ್ನು ಆಹ್ವಾನಿಸಲಾಗಿದೆ. ಕಾಮಗಾರಿಯ ವಿವರ ಈ ಕೆಳಗೆ ತೋರಿಸಿದ ನಮೂನೆಯಲ್ಲಿ ಇರುತ್ತದೆ.

ಗುತ್ತಿಗೆದಾರರು ಅಂದರೆ ವೈಯಕ್ತಿಕ/ಫರ್ಮ್/ಸಂಯುಕ್ತವಾಗಿ ಎರಡು ಅಥವಾ ಹೆಚ್ಚಿನ ಗುತ್ತಿಗೆದಾರರು/ಫರ್ಮ್ ಅಥವಾ ಎರಡು ಹೊಂದಿರುವ ಪ್ರಮುಖ ಪಾಲುದಾರರು. ಖಾಲಿ ತಾಂತ್ರಿಕ ಮತ್ತು ಆರ್ಥಿಕ ಬಿಡ್ ದಸ್ತಾವೇಜುಗಳನ್ನು ಕಾರ್ಯನಿರ್ವಾಹಕ ಅಭಿಯಂತರರು, ಸಣ್ಣ ನೀರಾವರಿ ವಿಭಾಗ, ಬೆಂಗಳೂರು ಇವರ ಕಛೇರಿಯಿಂದ ಕಛೇರಿ ಕೆಲಸದ ವೇಳೆಯಲ್ಲಿ ಲಿಖಿತ ಅರ್ಜಿ ಮೂಲಕ ನಿಗದಿಪಡಿಸಿದ ಮೊತ್ತವನ್ನು ಪಾವತಿಸುವ ಮೂಲಕ ಕಾರ್ಯಪಾಲಕ ಅಭಿಯಂತರರು, ಸಣ್ಣ ನೀರಾವರಿ ವಿಭಾಗ, ಬೆಂಗಳೂರು ಇವರಿಂದ ಪಡೆಯಬಹುದು ಮತ್ತು ಭರ್ತಿ ಮಾಡಿದ ಟೆಂಡರ್ ದಾಖಲೆಯನ್ನು ಇ.ಎಂ.ಡಿ.ಯನ್ನು ತಾಂತ್ರಿಕ ಬಿಡ್‌ನೊಂದಿಗೆ ಕಾರ್ಯಪಾಲಕ ಅಭಿಯಂತರರು, ಸಣ್ಣ ನೀರಾವರಿ ವಿಭಾಗ, ಬೆಂಗಳೂರು ಇವರಿಗೆ ಸಲ್ಲಿಸಬಹುದು. ಗುತ್ತಿಗೆ ಪಡೆಯುವಲ್ಲಿ ಯಶಸ್ವಿಯಾಗದ ಬಿಡ್‌ದಾರರ ಇ.ಎಂ.ಡಿ. ಮೊತ್ತವನ್ನು ಟೆಂಡರ್ ತೆರೆದ 90 ದಿನಗಳ ನಂತರ ಹಿಂತಿರುಗಿಸಲಾಗುವುದು.

**ಕಾಮಗಾರಿಯ ವಿವರಗಳು**

| ಕ್ರ. ಸಂ. | ಕಾಮಗಾರಿಯ ಹೆಸರು | ಟೆಂಡರಿಗಿಟ್ಟ ಅಂದಾಜು ಮೊತ್ತ (ರೂ.ಲಕ್ಷಗಳಲ್ಲಿ) | ಇ.ಎಂ.ಡಿ. (ರೂ. ಗಳಲ್ಲಿ) | ಖಾಲಿ ಟೆಂಡರ್ ಫಾರ್ಮಿನ ಬೆಲೆ (ತಾಂತ್ರಿಕ ಬಿಡ್ ಮತ್ತು ಆರ್ಥಿಕ ಬಿಡ್ ದ್ವಿಪ್ರತಿಗಳು) ತೆರಿಗೆ ಪ್ರತ್ಯೇಕ (ಹಿಂದಿರುಗಿಸಲಾಗದು) (ರೂ.ಗಳಲ್ಲಿ) | ಗುತ್ತಿಗೆದಾರರ ದರ್ಜೆ | ಕಾಮಗಾರಿಯನ್ನು ಪೂರ್ಣ ಗೊಳಿಸಬೇಕಾದ ಅವಧಿ ಮಳೆಗಾಲ ಹೊರತುಪಡಿಸಿ |
|---|---|---|---|---|---|---|
| 1. | ಅ) ರಾಮನಗರ ಜಿಲ್ಲೆ, ರಾಮನಗರ ತಾ:ಹುಚ್ಚಮ್ಮನದೊಡ್ಡಿ ಏತ ನೀರಾವರಿ ಯೋಜನೆ ಪುನರುಜ್ಜೀವನ ಕಾಮಗಾರಿ | 125.00 | 1,25000 | 10000 + ವ್ಯಾಟ್ @ 12.5% | 1ನೇ ದರ್ಜೆ | 9 ತಿಂಗಳು |
| 2. | ಆ) ರಾಮನಗರ ಜಿಲ್ಲೆ ರಾಮನಗರ ತಾ:ಮೊಟ್ಟೆದೊಡ್ಡಿ ಏತ ನೀರಾವರಿ ಯೋಜನೆ ಪುನರುಜ್ಜೀವನ ಕಾಮಗಾರಿ | 150.00 | 1,50000 | 10000 + ವ್ಯಾಟ್ @ 12.5% | 1ನೇ ದರ್ಜೆ | 9 ತಿಂಗಳು |

ಎರಡು ಲಕೋಟೆ ಟೆಂಡರ್ ಸಲ್ಲಿಸುವಲ್ಲಿ ತಾಂತ್ರಿಕ ಬಿಡ್ ಭಾಗ 1 ಮತ್ತು ಆರ್ಥಿಕ ಬಿಡ್ ಭಾಗ 2 ಎಂಬ ಪದ್ಧತಿಯನ್ನು ಅನುಸರಿಸುವುದು. ತಾಂತ್ರಿಕ ಬಿಡ್ಡಿನ ಮೌಲ್ಯ ಮಾಪನವನ್ನು ಅರ್ಜಿದಾರರು ಸಲ್ಲಿಸಿರುವ ವಿವರಗಳ ಆಧಾರದ ಮೇಲೆ ಮಾಡಲಾಗುವುದು.

ಗುತ್ತಿಗೆದಾರರು ಖಾಲಿ ಟೆಂಡರ್ ದಸ್ತಾವೇಜುಗಳನ್ನು ಕಾರ್ಯನಿರ್ವಾಹಕ ಅಭಿಯಂತರರು, ಸಣ್ಣ ನೀರಾವರಿ ವಿಭಾಗ, ಬೆಂಗಳೂರು ಇವರ ಕಛೇರಿಯಿಂದ ದಸ್ತಾವೇಜುಗಳಿಗೆ ನಿಗದಿಪಡಿಸಿದ ಮೊತ್ತವನ್ನು ಡಿ.ಡಿ. ಮುಖಾಂತರ (ಹಿಂದಿರುಗಿಸಲಾಗುವುದಿಲ್ಲ) ಪಾವತಿಸಿ ದಸ್ತಾವೇಜುಗಳನ್ನು ಪಡೆಯಬಹುದು.

**ಹಣ ಪಾವತಿಸುವ ವಿಧಾನ:**

ಡಿ.ಡಿ. ಅಥವಾ ಬ್ಯಾಂಕ್ ಚೆಕ್‌ನ್ನು ಕಾರ್ಯನಿರ್ವಾಹಕ ಅಭಿಯಂತರರು, ಸಣ್ಣ ನೀರಾವರಿ ವಿಭಾಗ, ಬೆಂಗಳೂರು ಇವರ ಹೆಸರಿಗೆ ಪಡೆದು ಯಾವುದೇ ರಾಷ್ಟ್ರೀಕೃತ ಬ್ಯಾಂಕ್ ಅಥವಾ ಶೆಡ್ಯೂಲ್ಡ್ ಬ್ಯಾಂಕಿನಿಂದ ನಗದೀಕರಿಸುವಂತಿರತಕ್ಕದ್ದು.

1) ಖಾಲಿ ಟೆಂಡರ್ ದಸ್ತಾವೇಜುಗಳನ್ನು ಪಡೆಯಲು ಅರ್ಜಿ ಸ್ವೀಕರಿಸುವ ಕೊನೆಯ ದಿನಾಂಕ: 29.12.2007
2) ಖಾಲಿ ಟೆಂಡರ್ ದಸ್ತಾವೇಜುಗಳನ್ನು ನೀಡುವ ಕೊನೆಯ ದಿನಾಂಕ:31.12.07
3) ಭರ್ತಿ ಮಾಡಿದ ಮೊಹರಬಂದ ಟೆಂಡರ್ ದಸ್ತಾವೇಜುಗಳನ್ನು ಸ್ವೀಕರಿಸುವ ಕೊನೆಯ ದಿನಾಂಕ: 7.01.2008
4) ಭರ್ತಿ ಮಾಡಲಾದ ಟೆಂಡರ್‌ಗಳನ್ನು ಕಾರ್ಯಪಾಲಕ ಅಭಿಯಂತರರು, ಸಣ್ಣ ನೀರಾವರಿ ವಿಭಾಗ, ಬೆಂಗಳೂರು ಇವರ ಕಾರ್ಯಾಲಯದಲ್ಲಿ ನಿಗದಿಪಡಿಸಿದ ದಿನಾಂಕ:7.1.2008 ಮತ್ತು ವೇಳೆ 4.00 ಗಂಟೆಗೆ ಸ್ವೀಕರಿಸಲಾಗುವುದು.
5) ಇ.ಎಂ.ಡಿ.ಯನ್ನು ರಾಷ್ಟ್ರೀಕೃತ ಬ್ಯಾಂಕಿನಿಂದ ಡಿ.ಡಿ. ಅಥವಾ ಬ್ಯಾಂಕ್ ಚೆಕ್‌ನ್ನು ಕಾರ್ಯನಿರ್ವಾಹಕ ಅಭಿಯಂತರರು, ಸಣ್ಣ ನೀರಾವರಿ ವಿಭಾಗ, ಬೆಂಗಳೂರು ಇವರ ಹೆಸರಿಗೆ ಪಡೆದಿರಬೇಕು. ಮಾನ್ಯತೆ ಹೊಂದಿರದ ಇ.ಎಂ.ಡಿ. ಟೆಂಡರ್‌ನೊಂದಿಗೆ ಲಗತ್ತಿಸಿ ಸಲ್ಲಿಸಿದ್ದಲ್ಲಿ ಅಂತಹ ಟೆಂಡರ್‌ಗಳನ್ನು ರದ್ದುಗೊಳಿಸಲಾಗುವುದು. ಈ ಇ.ಎಂ.ಡಿ.ಯನ್ನು ಟೆಂಡರ್ ತೆರೆದ ದಿನಾಂಕದಿಂದ 90 (ತೊಂಭತ್ತು) ದಿವಸದ ಅವಧಿಗೆ ಮಾನ್ಯತೆ ಹೊಂದಿರಬೇಕು.
6) ಈ ಕೆಳಕಂಡ ದೃಢೀಕರಿಸಿದ ಪ್ರಮಾಣ ಪತ್ರಗಳನ್ನು ತಾಂತ್ರಿಕ ಬಿಡ್ಡಿನ ಜೊತೆಯಲ್ಲಿ ಲಗತ್ತಿಸಿರಬೇಕು.
   ಅ)ಕೆ.ಪಿ.ಡಬ್ಲ್ಯೂ.ಡಿ. ಕರ್ನಾಟಕ ರಾಜ್ಯದ ಗುತ್ತಿಗೆದಾರರ ನೋಂದಣಿ ಪ್ರಮಾಣ ಪತ್ರ
   ಆ)ಇತ್ತೀಚಿನ ಇನ್‌ಕಂ ಟ್ಯಾಕ್ಸ್ ಕ್ಲಿಯರೆನ್ಸ್ ಪ್ರಮಾಣ ಪತ್ರ
   ಇ)ಕರ್ನಾಟಕ ರಾಜ್ಯದ ಇತ್ತೀಚಿನ ಸೇಲ್ಸ್ ಟ್ಯಾಕ್ಸ್ ಕ್ಲಿಯರೆನ್ಸ್ ಪ್ರಮಾಣ ಪತ್ರ.

ಈ ಮೇಲಿನ ಎಲ್ಲಾ ಮೂಲ ಪ್ರಮಾಣ ಪತ್ರಗಳನ್ನು ದಿನಾಂಕ:29.12.2007 ಅಥವಾ ಮುಂಚಿತವಾಗಿ ಕಛೇರಿ ವೇಳೆಯಲ್ಲಿ ಪರಿಶೀಲನೆಗಾಗಿ ಒದಗಿಸುವುದು.

7) ತಾಂತ್ರಿಕ ಬಿಡ್‌ಗಳನ್ನು ಈ ಕೆಳಗೆ ಸಹಿ ಮಾಡಿರುವ ಕಾರ್ಯನಿರ್ವಾಹಕ ಅಭಿಯಂತರರು, ಸಣ್ಣ ನೀರಾವರಿ ವಿಭಾಗ, ಬೆಂಗಳೂರು ಇವರ ಕಛೇರಿಯಲ್ಲಿ ದಿನಾಂಕ: 7.1.2008 ರಂದು ಮಧ್ಯಾಹ್ನ 4.30 ಗಂಟೆಗೆ ಅಥವಾ ಅನುಕೂಲವಾದ ದಿನಾಂಕದಂದು ತೆರೆಯಲಾಗುವುದು. ತಾಂತ್ರಿಕ ಬಿಡ್ಡಿನಲ್ಲಿ ಅರ್ಹತೆ ಹೊಂದಿರುವವರ ಹೆಸರಿನ ಪಟ್ಟಿಯನ್ನು

ಕಾರ್ಯನಿರ್ವಾಹಕ ಅಭಿಯಂತರರು, ಸಣ್ಣ ನೀರಾವರಿ ವಿಭಾಗ, ಬೆಂಗಳೂರು ಇವರ ಕಛೇರಿ ನೋಟೀಸ್ ಫಲಕದಲ್ಲಿ ಪ್ರಕಟಿಸಲಾಗುವುದು. ಕೇವಲ ತಾಂತ್ರಿಕ ಬಿಡ್ಡಿನಲ್ಲಿ ಅರ್ಹತೆ ಹೊಂದಿದವರ ಆರ್ಥಿಕ ಬಿಡ್ಡನ್ನು ಮಾತ್ರ ಒಡೆದು ತುಲನೆ ಮಾಡಲಾಗುವುದು.

**ತಾಂತ್ರಿಕ ಬಿಡ್ ಭಾಗ 1**

ಗುತ್ತಿಗೆದಾರರು ತಮ್ಮ ತಾಂತ್ರಿಕ ಬಿಡ್ ಸಾಮರ್ಥ್ಯಕ್ಕೆ ಅನುಗುಣವಾಗಿ ಈ ಕೆಳಕಾಣಿಸಿರುವ ನಿಬಂಧನೆಗಳಿಗೆ ಅರ್ಹತೆ ಹೊಂದುವವರು ಮಾತ್ರ ಅರ್ಜಿಗಳನ್ನು ಸಲ್ಲಿಸತಕ್ಕದ್ದು.

1. ವೈಯಕ್ತಿಕ ಫರ್ಮ್/ಸಂಯುಕ್ತ ಎರಡು ಅಥವಾ ಹೆಚ್ಚಿನ ಗುತ್ತಿಗೆದಾರರು ಪ್ರತಿಯೊಬ್ಬರು ಕೆಳಗಿನ ವಿವರ ಹೊಂದಿರಬೇಕು.
   2007-08ನೇ ಆರ್ಥಿಕ ಸಾಲಿನ ಹಿಂದಿನಿಂದ 5 ವರ್ಷಗಳ ವಹಿವಾಟಿನಲ್ಲಿ (2002-03 ರಿಂದ 2006-07);

I. ಕನಿಷ್ಟ ಎರಡು ಬೇರೆ ಆರ್ಥಿಕ ವರ್ಷದಲ್ಲಿ ಕ್ರ.ಸಂ:1ಕ್ಕೆ 250 ಲಕ್ಷಗಳು ಮತ್ತು ಕ್ರಮ ಸಂ:2ಕ್ಕೆ 300 ಲಕ್ಷಗಳು ಕಡಿಮೆಯಿಲ್ಲದಂತೆ (ಎಲ್ಲಾ ಸಿವಿಲ್ ಕಾಮಗಾರಿಗಳಿಗೆ ಮಾತ್ರ) ವಾರ್ಷಿಕ ವಹಿವಾಟು ಮಾಡಿರಬೇಕು. ಕಳೆದ 5 ವರ್ಷಗಳಲ್ಲಿ ಮಾಡಿರುವ ಆರ್ಥಿಕ ವಹಿವಾಟಿಗೆ, 2007-08ನೇ ಸಾಲಿಗೆ ಹೋಲಿಸಿದಂತೆ ಪ್ರತಿ ಸಾಲಿಗೆ ಶೇಕಡಾ 10ರ ವೈಟೇಜ್ ಪರಿಗಣಿಸಲಾಗುವುದು.

II. ಪ್ರಮುಖ ಗುತ್ತಿಗೆದಾರರೆಂದು ಕನಿಷ್ಠ ಇಂತಹದೆ ಒಂದು ಕಾಮಗಾರಿ ಕ್ರಮ ಸಂ:1ಕ್ಕೆ 112.50 ಲಕ್ಷ ಮತ್ತು ಕ್ರಮ ಸಂ:2ಕ್ಕೆ 135.00 ಲಕ್ಷಗಳಿಗೆ ಕಡಿಮೆಯಿಲ್ಲದಂತೆ ತೃಪ್ತಿಕರವಾಗಿ ಕೆಲಸ ನಿರ್ವಹಿಸಿರಬೇಕು ಪ್ರಮುಖ ಗುತ್ತಿಗೆದಾರರೆಂದರೆ ಕಾಮಗಾರಿಯನ್ನು ಸ್ವತಃ ನಿರ್ಮಿಸಿ ಸ್ವಂತ ಅವರ ಹೆಸರಿನಲ್ಲಿ ಬಿಲ್ಲನ್ನು ಪಡೆದಿರತಕ್ಕದ್ದು.

III. ಯಾವುದೇ ಒಂದು ವರ್ಷದಲ್ಲಿ ಈ ಕೆಳಕಾಣಿಸಿದ ಕನಿಷ್ಠ ಪರಿಮಾಣದ ಕೆಲಸಗಳನ್ನು ಮಾಡಿರಬೇಕು.

ಕ್ರಮ ಸಂ: 1ಕ್ಕೆ

| | | | |
|---|---|---|---|
| (ಅ) | ಅಗೆತದ ಕೆಲಸ (ಎಲ್ಲಾ ಸ್ಥರಗಳು ಸೇರಿದಂತೆ) | - | 3200.00 ಘಮೀ. |
| (ಬ) | ಕಾಂಕ್ರೀಟ್ ಕೆಲಸ | - | 2600.00 ಘಮೀ. |
| (ಕ) | ಎಂ.ಎಸ್. ಗೇಟ್ | - | 13000.00 ಕೆ.ಜಿ |

ಕ್ರಮ ಸಂ: 2ಕ್ಕೆ

| | | | |
|---|---|---|---|
| (ಅ) | ಅಗೆತದ ಕೆಲಸ (ಎಲ್ಲಾ ಸ್ಥರಗಳು ಸೇರಿದಂತೆ) | - | 3600.00 ಘಮೀ., |
| (ಬ) | ಕಾಂಕ್ರೀಟ್ ಕೆಲಸ | - | 1700.00 ಘಮೀ., |
| (ಕ) | ಎಂ.ಎಸ್. ಗೇಟ್ | - | 20000.00 ಕೆಜಿ., |

2) ಅರ್ಜಿದಾರರು ಕೆಳಕಂಡ ಸಾಮರ್ಥ್ಯವನ್ನು ಪ್ರದರ್ಶಿಸುವುದು.

ಅ) ಈ ಯೋಜನೆಗೆ 5 ವರ್ಷಗಳ ಸಿವಿಲ್ ಇಂಜಿನಿಯರಿಂಗ್ ಕಾಮಗಾರಿಯ ಇಂತಹದೆ ಅನುಭವವುಳ್ಳ ಒಬ್ಬ ಮ್ಯಾನೇಜರ್ ಹಾಗೂ ಸಾಕಷ್ಟು ಅನುಭವವುಳ್ಳ ಈ ತರಹದ ಕೆಲಸ ಮಾಡಿರುವ ಪರಿಣತರನ್ನು ಹೊಂದಿರಬೇಕು.

ಆ) ಈ ಕಾಮಗಾರಿಗೆ ಬೇಕಾದ ಸಂಪನ್ಮೂಲ ಚರಾಸ್ಥಿ ಅಥವಾ ಹಣರೂಪದಲ್ಲಿ ಕನಿಷ್ಠ ರೂ. ಕ್ರಮ ಸಂಖ್ಯೆ:1ಕ್ಕೆ 37.50, ಕ್ರ.ಸಂ:2ಕ್ಕೆ 45.00, ಲಭ್ಯತೆಯ ಬಗ್ಗೆ ಪ್ರಮಾಣ ಪತ್ರ ಕ್ರೆಡಿಟ್ ಲೈನ್ಸ್/ಅನುದಾನ ಪ್ರಮಾಣ ಪತ್ರ ಬ್ಯಾಂಕಿನಿಂದ ಪ್ರಮಾಣೀಕರಿಸಿದ್ದು.

ಇ) ಗುತ್ತಿಗೆದಾರರು ಈ ಕೆಳ ಕಾಣಿಸಿದ ಯಂತ್ರೋಪಕರಣಗಳನ್ನು ಸ್ವಂತ ಅಥವಾ ಲೀಸ್ ಮೇಲೆ ಹೊಂದಿರತಕ್ಕದ್ದು.

| | | |
|---|---|---|
| ಅ) | ಎಕ್ಸ್‌ಕವೇಟರ್/ಪೊಕ್ಲೇನ್ (0.9 ಘ.ಮೀ ಸಾಮರ್ಥ್ಯ) | 1 ಸಂಖ್ಯೆ |
| ಆ) | ಲಾರಿಗಳು / ಟಿಪ್ಪರ್‌ಗಳು | 2 ಸಂಖ್ಯೆ |
| ಇ) | ಕಾಂಕ್ರೀಟ್ ಮೆಷಿನ್ ಮಿಕ್ಸರ್ (10/7 ಘ.ಅಡಿ ಸಾಮರ್ಥ್ಯ) | 2 ಸಂಖ್ಯೆ |
| ಈ) | ವೈಬ್ರೇಟರ್ | 4 ಸಂಖ್ಯೆ |
| ಉ) | ಪಂಪ್‌ಸೆಟ್ (8 ಹೆಚ್.ಪಿ ಯಿಂದ 20 ಹೆಚ್.ಪಿ) | 2 ಸಂಖ್ಯೆ |
| ಊ) | ಕ್ರೇನ್/ಚೈನ್ ಪುಲ್ಲಿ (2 ಟನ್ ಸಾಮರ್ಥ್ಯ) | 1 ಸಂಖ್ಯೆ |

3) ಗುತ್ತಿಗೆದಾರರು ಕಾಮಗಾರಿಗೆ ಬೇಕಾಗುವ ಐ.ಎಸ್.ಗುಣಮಟ್ಟವುಳ್ಳ ಸ್ಟೀಲ್, ಸಿಮೆಂಟನ್ನು ತಮ್ಮ ಸ್ವಂತ ಖರ್ಚಿನಲ್ಲಿ ಪೂರೈಸಿಕೊಳ್ಳತಕ್ಕದ್ದು.

4) ತಾಂತ್ರಿಕ ಬಿಡ್ಡಿನ ಅರ್ಹತೆಗಾಗಿ ಸಲ್ಲಿಸಿರುವ ದಸ್ತಾವೇಜುಗಳ ಪ್ರಾಮಾಣಿಕತೆ ಮತ್ತು ಸತ್ಯಾಸತ್ಯತೆಗಳನ್ನು ಖಚಿತಗೊಳಿಸಲು ಅವುಗಳ ಮೇಲೆ ಗುತ್ತಿಗೆದಾರರು ದೃಢೀಕರಿಸಿ ಸಹಿ ಮಾಡತಕ್ಕದ್ದು. ದಸ್ತಾವೇಜುಗಳ ಮೇಲೆ ಗುತ್ತಿಗೆದಾರರಿಂದ ದೃಢೀಕರಿಸಿ ಸಹಿ ಮಾಡದಿದ್ದಲ್ಲಿ ಅಂತಹ ದಸ್ತಾವೇಜುಗಳನ್ನು ತಾಂತ್ರಿಕ ಮೌಲ್ಯ ಮಾಪನ ಮಾಡಲು ಪರಿಗಣಿಸಲಾಗುವುದಿಲ್ಲ. ತಾಂತ್ರಿಕ ಬಿಡ್‌ನಲ್ಲಿ ಅರ್ಹತೆ ಹೊಂದಿರುವ ಗುತ್ತಿಗೆದಾರರ ಆರ್ಥಿಕ ಬಿಡ್‌ಗಳನ್ನು ಮಾತ್ರ ಮುಂದೆ ತಿಳಿಸಲಾಗುವ ನಿಗದಿತ ದಿನಾಂಕ ಮತ್ತು ಸಮಯದಂದು ತೆರೆಯಲಾಗುವುದು.

5) ಗುತ್ತಿಗೆದಾರರು ಕಾಮಗಾರಿ ನಿರ್ವಹಿಸುವ ಬಗ್ಗೆ ಅವಶ್ಯಕ ಮಾನವ ಶಕ್ತಿ ಹೊಂದಿರಬೇಕು.

6) ಅಂಚೆ/ಕೊರಿಯರ್ ಮೂಲಕ ಟೆಂಡರ್ ದಸ್ತಾವೇಜುಗಳನ್ನು ಸಲ್ಲಿಸಿದ್ದಲ್ಲಿ, ತಡವಾಗಿ ತಲುಪಿದ್ದಲ್ಲಿ ಸಣ್ಣ ನೀರಾವರಿ ಇಲಾಖೆ ಅಂಚೆ ವಿಳಂಬಕ್ಕೆ ಹೊಣೆಗಾರರಾಗುವುದಿಲ್ಲ.

7) ಮೇಲೆ ತಿಳಿಸಿರುವ ದಿನಾಂಕಗಳಂದು ಸರ್ಕಾರಿ ರಜೆ ಇದ್ದಲ್ಲಿ ಮುಂದಿನ ದಿನಾಂಕವನ್ನು ಕೆಲಸದ ದಿನಾಂಕವೆಂದು ಪರಿಗಣಿಸುವುದು.

8) ಟೆಂಡರ್ ಸ್ವೀಕರಿಸುವ ಸಕ್ಷಮ ಅಧಿಕಾರಿಗಳು ಯಾವುದೇ ಟೆಂಡರ್ ಅಥವಾ ಎಲ್ಲಾ ಟೆಂಡರ್‌ಗಳನ್ನು ಕಾರಣವನ್ನು ನೀಡದೆ ತಿರಸ್ಕರಿಸುವ ಹಕ್ಕನ್ನು ಕಾಯ್ದಿರಿಸಿಕೊಂಡಿರುತ್ತಾರೆ.

9) ಏನಾದರೂ ತಿದ್ದುಪಡಿಗಳಿದ್ದರೆ ಕಾರ್ಯನಿರ್ವಾಹಕ ಅಭಿಯಂತರರು, ಸಣ್ಣ ನೀರಾವರಿ ವಿಭಾಗ, ಬೆಂಗಳೂರು ಇವರ ಕಛೇರಿಯ ನೋಟೀಸ್ ಫಲಕದಲ್ಲಿ ಪ್ರಕಟಿಸಲಾಗುವುದು.

10) ಗುತ್ತಿಗೆದಾರರು ಟೆಂಡರ್‌ನಲ್ಲಿ ಭಾಗವಹಿಸುವ ಮೊದಲು ಕಾಮಗಾರಿ ಸ್ಥಳವನ್ನು ಪರಿವೀಕ್ಷಣೆ ಮಾಡಿ ಭಾಗವಹಿಸುವುದು. ನಂತರ ಕಾಮಗಾರಿಯ ಸ್ಥಳದ ಬಗ್ಗೆ ಯಾವುದೇ ತಂಟೆ ತಕರಾರುಗಳಿಗೆ ಇಲಾಖೆಯು ಜವಾಬ್ದಾರವಾಗುವುದಿಲ್ಲ.

11) ಟೆಂಡರ್ ಡಾಕ್ಯೂಮೆಂಟಿನ ಭಾಗ-2ರ ಸೆಕ್ಷನ್ 1ರಲ್ಲಿ ಗುತ್ತಿಗೆದಾರರು ತಮ್ಮ ಸ್ವಂತ ಷರತ್ತು ಅಥವಾ ಇನ್ನಾವುದೇ ಬದಲಾವಣೆ ಮಾಡಿದ್ದಲ್ಲಿ ಅಂತಹ ಟೆಂಡರುಗಳನ್ನು ತಿರಸ್ಕರಿಸಲಾಗುವುದು.

12) ಈ ಬಗ್ಗೆ ಹೆಚ್ಚಿನ ಮಾಹಿತಿ ಬೇಕಾದಲ್ಲಿ ಈ ಕೆಳಗೆ ಸಹಿ ಮಾಡಿದ ಅಧಿಕಾರಿಗಳ ಕಛೇರಿ ಕೆಲಸದ ವೇಳೆಯಲ್ಲಿ ಪಡೆಯಬಹುದು.

13) ಎಲ್ಲಾ ಲಕೋಟೆಗಳ ಮೇಲೆ ಕೆಲಸದ ಹೆಸರನ್ನು ಸ್ಪಷ್ಟವಾಗಿ ಬರೆಯಬೇಕು ಹಾಗೂ ಲಕೋಟೆ 1 (ತಾಂತ್ರಿಕ ಬಿಡ್) ಹಾಗೂ ಲಕೋಟೆ 2 (ಆರ್ಥಿಕ ಬಿಡ್) ಎಂದು ಸ್ಪಷ್ಟವಾಗಿ ನಮೂದಿಸಬೇಕು. ಎರಡೂ ಲಕೋಟೆಗಳನ್ನು ಸೇರಿಸಿ ಒಂದು ದೊಡ್ಡ ಲಕೋಟೆಯಲ್ಲಿ ಸೀಲ್ ಮಾಡಿ, ಕೆಲಸದ ಹೆಸರನ್ನು ಬರೆದು ಟೆಂಡರ್ ಸಲ್ಲಿಸುವುದು.

14) ಕೆಲಸಕ್ಕೆ ಬೇಕಾಗುವ ಭೂಮಿ (ಭಾಗಶಃ ಅಥವಾ ಪೂರ್ತಿ) ಸಣ್ಣ ನೀರಾವರಿ ಇಲಾಖೆಯ ಅಧೀನಕ್ಕೆ ಸಾಧ್ಯತೆಯಾಗದಿದ್ದಲ್ಲಿ ಗುತ್ತಿಗೆದಾರರು ಸ್ವತಃ ಸಂಧಾನದ ಮೂಲಕ ಸದರಿ ಭೂಮಿಯನ್ನು ಸ್ವಾಧೀನಕ್ಕೆ ತೆಗೆದುಕೊಂಡು ಕಾಮಗಾರಿ ಪೂರ್ಣಗೊಳಿಸಬೇಕು. ಭೂಸ್ವಾಧೀನತೆ ಸಂಧಾನತೆಯಿಂದ ಸಣ್ಣ ನೀರಾವರಿ ಇಲಾಖೆಗೆ ಯಾವುದೇ ಹೆಚ್ಚು ಆರ್ಥಿಕ ಹೊರೆ ಅಥವಾ ಕ್ಲೇಮುಗಳನ್ನು ಗುತ್ತಿಗೆದಾರರು ಕೇಳುವಂತಿಲ್ಲ.

ಎನ್. ಸಿದ್ದರಾಜು
ಕಾರ್ಯಪಾಲಕ ಅಭಿಯಂತರರು,
ಸಣ್ಣ ನೀರಾವರಿ ವಿಭಾಗ, ಬೆಂಗಳೂರು.

ಪಿ.ಆರ್. 765

## ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ರಾಮನಗರ ವಿಭಾಗ, ರಾಮನಗರ ರವರ ಕಛೇರಿ

## ಬಹಿರಂಗ ಹರಾಜು ಪ್ರಕಟಣೆ

ಸಂಖ್ಯೆ : ಎ6/ಟಿಂಬರ್/ರಾವ/ಸಿಆರ್– /2007–08, ದಿನಾಂಕ: 13ನೇ ಡಿಸೆಂಬರ್ 2007.

ವಿಷಯ: ರಾಮನಗರ ಅರಣ್ಯ ವಲಯಕ್ಕೆ ಸೇರಿದ ಜವಳಗೆರೆ ಬೀಟ್ ದಾಸರಹಳ್ಳಿ ನೆಡುತೋಪಿನಲ್ಲಿ ಕಡಿದು ಲಾಟ್ ಮಾಡಿರುವ ನೀಲಗಿರಿ ಟಿಂಬರ್ ಲಾಗ್‌ಗಳ ಹರಾಜು ಕುರಿತು.

ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ ಸಾರ್ವಜನಿಕರಿಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ ರಾಮನಗರ ಅರಣ್ಯ ವಿಭಾಗದ ರಾಮನಗರ ಅರಣ್ಯ ವಲಯದ ನೆಡುತೋಪುಗಳಲ್ಲಿ ಕತ್ತಾವಣೆ ಮಾಡಿದ ನೀಲಗಿರಿ ಮರಗಳಿಂದ ಲಭ್ಯವಾದ ಟಿಂಬರ್‌ನ್ನು ಲಾಟು ಮಾಡಿದ್ದು ಇವುಗಳನ್ನು ಬಹಿರಂಗ ಹರಾಜು ಮೂಲಕ ದಿನಾಂಕ: 07–01–2008 ರಂದು ಬೆಳಿಗ್ಗೆ 11.30 ಗಂಟೆಗೆ ವಲಯ ಅರಣ್ಯಾಧಿಕಾರಿ, ರಾಮನಗರ ವಲಯ ಇವರ ಕಛೇರಿ ಆವರಣದಲ್ಲಿ ಈ ಕೆಳಸಹಿದಾರರು ಅಥವಾ ಇವರಿಂದ ಅಧಿಕಾರ ಪಡೆದ ಅಧಿಕೃತ ಅಧಿಕಾರಿಯು ಕೆಳಕಂಡ ಷರತ್ತುಗಳ ಮೇಲೆ ಬಹಿರಂಗ ಹರಾಜನ್ನು ಮಾಡಲು ಉದ್ದೇಶಿಸಿ ಪ್ರಕಟಣೆ ಹೊರಡಿಸಲಾಗಿದೆ.

1. ಹರಾಜಿನಲ್ಲಿ ಭಾಗವಹಿಸುವವರು ರೂ. 5000.00 (ಐದು ಸಾವಿರ) ಗಳನ್ನು ನಗದು ರೂಪದಲ್ಲಿ ಠೇವಣಿಯಾಗಿ ಹರಾಜಿಗೆ ಒಂದು ಗಂಟೆ ಮುಂಚೆ ಪಾವತಿಸಬೇಕು.
2. ಹರಾಜಿನಲ್ಲಿ ಭಾಗವಹಿಸುವ ಮೊದಲು ಷೆಡ್ಯೂಲ್‌ನಲ್ಲಿ ನಮೂದಿಸಲಾದ ಇಡಿಗಂಟನ್ನು (EMD) ನಗದು ರೂಪದಲ್ಲಿ ಪಾವತಿಸತಕ್ಕದ್ದು.
3. ಷೆಡ್ಯೂಲ್‌ನಲ್ಲಿ ಸೂಚಿಸಿರುವ ನಿಗಧಿತ ಸಮಯ ಮತ್ತು ದಿನಾಂಕದಂದು ಹರಾಜನ್ನು ನಡೆಸಲಾಗುವುದು.
4. ಇಡಿಗಂಟನ್ನು ಜಮಾ ಮಾಡದೇ ಬಿಡ್‌ದಾರರು ಹರಾಜಿನಲ್ಲಿ ಭಾಗವಹಿಸುವ ಹಕ್ಕು ಇರುವುದಿಲ್ಲ.
5. ಷೆಡ್ಯೂಲ್‌ನಲ್ಲಿ ಸೂಚಿಸಿರುವ ಮತ್ತು ಕತ್ತಾವಣೆ ಮಾಡಿ ಲಾಟ್ ಮಾಡಿರುವ ನೀಲಗಿರಿ ಮರಗಳ ಲಾಗ್‌ಗಳನ್ನು ಪರಿಶೀಲಿಸಿ ಖಚಿತಪಡಿಸಿಕೊಂಡ ನಂತರ ಹರಾಜಿನಲ್ಲಿ ಭಾಗವಹಿಸಬೇಕು.
6. ಷೆಡ್ಯೂಲ್‌ನಲ್ಲಿ ತೋರಿಸಿರುವ ಪ್ರತಿ ಲಾಟ್‌ಗೆ ಪ್ರತ್ಯೇಕ ಹರಾಜು ಮಾಡಲಾಗುವುದು.
7. ಯಶಸ್ವಿ ಬಿಡ್‌ದಾರರು ತಮ್ಮ ಸ್ವಂತ ಖರ್ಚಿನಲ್ಲಿ ವಿಲೇವಾರಿ ಮಾಡಿಕೊಳ್ಳತಕ್ಕದ್ದು.
8. ಟಿಂಬರ್ ಲಾಗ್‌ಗಳನ್ನು ಸಾಗಿಸಲು ಪರವಾನಗಿಯನ್ನು ನೀಡಲಾಗುವುದು. ಪರವಾನಗಿ ಶುಲ್ಕವನ್ನು ಯಶಸ್ವಿ ಬಿಡ್‌ದಾರರು ವಲಯ ಅರಣ್ಯಾಧಿಕಾರಿ, (ಪ್ರಾದೇಶಿಕ) ರಾಮನಗರ ಇವರಲ್ಲಿ ಜಮಾ ಮಾಡತಕ್ಕದ್ದು.
9. ಹರಾಜಿನಲ್ಲಿ ಯಶಸ್ವಿಯಾದ ಬಿಡ್ಡುದಾರರು ಹರಾಜಿನ ದಿನದಂದೇ ತಾವು ಸೂಚಿಸಿದ ಹರಾಜಿನ ಮೊತ್ತದ ಶೇಕಡ 50 ರಷ್ಟು ಹಣವನ್ನು ಹಾಗೂ ಸೂಚಿಸಿದ ಮೊತ್ತಕ್ಕೆ ಅನ್ವಯಿಸುವ ಪೂರ್ತಿ ತೆರಿಗೆಯನ್ನು ಅಂದರೆ ವ್ಯಾಟ್ 12.5%, ಅರಣ್ಯ

ಅಭಿವೃದ್ಧಿ ತೆರಿಗೆ 8%, ಆದಾಯ ತೆರಿಗೆ 2.5% ಮತ್ತು ಆದಾಯ ತೆರಿಗೆ ಮೇಲೆ ಸೆಸ್ 2% ರಷ್ಟು ತೆರಿಗೆಗಳನ್ನು ಪಾವತಿಸಬೇಕು. ತಪ್ಪಿದಲ್ಲಿ ಇ.ಎಂ.ಡಿ. ಮೊತ್ತವನ್ನು ಮುಟ್ಟುಗೋಲು ಹಾಕಿಕೊಂಡು 2ನೇ ಬಿಡ್ಡುದಾರರನ್ನು ಯಶಸ್ವಿ ಬಿಡ್ಡುದಾರರೆಂದು ಪರಿಗಣಿಸಲಾಗುವುದು.

10. ಬಹಿರಂಗ ಹರಾಜಿನಲ್ಲಿ ಉದ್ಭವಿಸಬಹುದಾದ ತಂಟೆತಕರಾರುಗಳಿಗೆ ಉಪ ಅರಣ್ಯ ಸಂರಕ್ಷಣಾಧಿಕಾರಿ, ರಾಮನಗರ ವಿಭಾಗ, ರಾಮನಗರರವರು ನೀಡುವ ತೀರ್ಮಾನವೇ ಅಂತಿಮವಾಗಿರುತ್ತದೆ.
11. ಕಪ್ಪು ಪಟ್ಟಿಯಲ್ಲಿರುವ ಬಿಡ್‌ದಾರರು ಅಥವಾ ದಿವಾಳಿಯಾಗಿರುವವರು ಈ ಬಹಿರಂಗ ಹರಾಜಿನಲ್ಲಿ ಭಾಗವಹಿಸಲು ಅರ್ಹರಿರುವುದಿಲ್ಲ.
12. ಹರಾಜಿನ ನಂತರ ಬರುವ ಬೆಲೆಗಳನ್ನು ಯಾವುದೇ ಕಾರಣಕ್ಕೂ ಪರಿಗಣಿಸಲಾಗುವುದಿಲ್ಲ.
13. ಯಾವುದೇ ತಂಟೆತಕರಾರುಗಳಿದ್ದಲ್ಲಿ ಹರಾಜು ಪ್ರಾರಂಭಿಸುವ ಎರಡು ಗಂಟೆ ಮುಂಚಿತವಾಗಿ ಸಂಬಂಧಿಸಿದ ಅಧಿಕಾರಿಗಳ ಗಮನಕ್ಕೆ ಲಿಖಿತ ಮೂಲಕ ತರತಕ್ಕದ್ದು ಹಾಗೂ ಹರಾಜಿನ ನಂತರ ತಡವಾಗಿ ಬರುವ ಯಾವುದೇ ತರಹದ ದೂರುಗಳನ್ನು ಗಣನೆಗೆ ತೆಗೆದುಕೊಳ್ಳುವುದಿಲ್ಲ.
14. ಯಶಸ್ವಿ ಬಿಡ್‌ದಾರರು ಹರಾಜು ಸ್ಥಿರೀಕರಣ ಆದೇಶ ಪಡೆದ 7 ದಿನಗಳೊಳಗಾಗಿ ನೀಲಗಿರಿ ಟಿಂಬರ್ ಲಾಗ್‌ಗಳನ್ನು ಬಾಕಿ ಇರುವ ಬಿಡ್‌ನ ಮೊತ್ತವನ್ನು ವಲಯ ಅರಣ್ಯಾಧಿಕಾರಿ, ರಾಮನಗರ ಇವರಿಗೆ ಪಾವತಿಸಿ ನೀಲಗಿರಿ ಟಿಂಬರ್ ಲಾಗ್‌ಗಳನ್ನು ತೆಗೆದುಕೊಂಡು ಹೋಗತಕ್ಕದು ನಿಗಧಿತ ಅವಧಿಯಲ್ಲಿ ಟಿಂಬರ್‌ನ್ನು ಸಾಗಿಸದ ಪಕ್ಷದಲ್ಲಿ E.M.D ಹಣವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವುದಲ್ಲದೆ ಬಿಡ್‌ದಾರರ ಜವಾಬ್ದಾರಿ ಮೇರೆಗೆ ನೀಲಗಿರಿ ಟಿಂಬರ್‌ನ್ನು ಮರು ಹರಾಜು ಮಾಡಲಾಗುವುದು. ಮರು ಹರಾಜಿನಲ್ಲಿ ಕಡಿಮೆ ಬಿಡ್ ಬಂದ ಸರ್ಕಾರಕ್ಕೆ ನಷ್ಟವಾದಲ್ಲಿ 1963 ರ ಅರಣ್ಯ ಕಾಯ್ದೆ ಸೆಕ್ಷನ್ 109 ರಂತೆ ಬಾಕಿಯನ್ನು ಭೂಕಂದಾಯ ರೂಪದಲ್ಲಿ ವಸೂಲಿ ಮಾಡಲಾಗುವುದು ಅಥವಾ ಸರಕು ಸಾಮಾಗ್ರಿಗಳ ಮಾರಾಟದ ಕಾನೂನಿನನ್ವಯ ಅಥವಾ ಭಾರತೀಯ ದಂಡ ಸಂಹಿತೆ (Civil procedure) ಅನ್ವಯ ಕ್ರಮ ಕೈಗೊಳ್ಳಲಾಗುವುದು.
15. ಈ ಹರಾಜನ್ನು ಯಾವುದೇ ಕಾರಣ ನೀಡದೆ ತಿರಸ್ಕರಿಸುವ ಪೂರ್ಣ ಅಧಿಕಾರವನ್ನು ಉಪ ಅರಣ್ಯ ಸಂರಕ್ಷಣಾಧಿಕಾರಿಗಳು ಪಡೆದಿರುತ್ತಾರೆ.
16. ಕರ್ನಾಟಕ ರಾಜ್ಯದಲ್ಲಿಯ ಸವಾಲುದಾರರನ್ನು ಹೊರತುಪಡಿಸಿ, ಅಥವಾ ಯಾವುದೇ ತರಹದ ಆಸ್ತಿಯು ಕರ್ನಾಟಕ ರಾಜ್ಯದಲ್ಲಿ ಇಲ್ಲದಂಥ ಸವಾಲುದಾರರು ಹರಾಜಿನಲ್ಲಿ ಭಾಗವಹಿಸುವುದಕ್ಕಿಂತ ಮುಂಚಿತವಾಗಿ ಹರಾಜು ಮಾಡುವ ಅಧಿಕಾರಿಗೆ ತಮ್ಮ ಬಿಡ್‌ನ ಅರ್ಧ ರಕಂನ್ನು ಜಾರಿಯಲ್ಲಿದ ಮಾರಾಟ ಕರ ಮತ್ತು ಅರಣ್ಯಾಭಿವೃದ್ಧಿ ಕರ ಕೊಡಬೇಕು. ಸದರಿ ರಕಂ ಮುಂದಿನ 100 ರೂಗೆ ಸರಿ ಇರಬೇಕು ಮೇಲೆ ವಿವರಿಸಿದಂತೆ ಯಶಸ್ವಿ ಬಿಡ್‌ದಾರರು ಶೇಕಡಾ 50 ಬಿಡ್‌ನ ರಕಂ ಕಟ್ಟಿದಲ್ಲಿ ಉಳಿದ ಶೇ 50 ರಕಂನ್ನು ಚಾಲ್ತಿಯಲ್ಲಿರುವ ಎಲ್ಲಾ ಕರಗಳೊಡನೆ ಪಾವತಿ ಮಾಡತಕ್ಕದ್ದು ಶೇ 50 ಉಳಿದ ಹಣವನ್ನು ಕರಾರುನಾಮೆ ಸಹಿ ಮಾಡುವುದಕ್ಕಿಂತ ಪೂರ್ವದಲ್ಲಿ ಪಾವತಿ ಮಾಡಬೇಕಾಗುವುದು.
17. ಬಿಡ್ಡುದಾರರು ಹರಾಜನ್ನು ನಡೆಸುವ ಅಧಿಕಾರಿಯ ಬಳಿ ನೀಡುವ ವಿಳಾಸವೇ ಅಂತಿಮ ಈ ವಿಳಾಸಕ್ಕೆ ಅಂಚೆ ದೃಢೀಕರಣ ಪತ್ರ ಪಡೆದು ಕಳುಹಿಸಿದ ಪತ್ರವು ಬಿಡ್ಡುದಾರರಿಗೆ ತಲುಪಿದೆ ಎಂದೇ ತಿಳಿಯಲಾಗುವುದು.
18. ಪ್ರತಿ ಲಾಟ್‌ಗೆ ಅತಿ ಹೆಚ್ಚು ಬಿಡ್ಡು ಮಾಡಿದ ಬಿಡ್ಡುದಾರರ ಹೆಸರನ್ನು ದಾಖಲಿಸಿ ಅವರ ಸಹಿಯನ್ನು ಬಿಡ್ಡರ್ಸ್ ಪಟ್ಟಿಯಲ್ಲಿ ತೆಗೆದುಕೊಳ್ಳಲಾಗುವುದು ಅನಂತರ ಯಾವುದೇ ಬಿಡ್ಡನ್ನು ಅಂಗೀಕರಿಸುವುದಿಲ್ಲ.
19. ಒಂದು ವೇಳೆ ಅತಿ ಹೆಚ್ಚು ಬಿಡ್ಡು ಮಾಡಿದ ಬಿಡ್ಡುದಾರರ ದರವನ್ನು ಹರಾಜು ನಡೆಸುವ ಅಧಿಕಾರಿ ತಿರಸ್ಕರಿಸಿದಲ್ಲಿ, ನಂತರದ ಅತಿ ಹೆಚ್ಚು ಬಿಡ್ಡು ಮಾಡಿರುವವರ ಬಿಡ್ಡನ್ನು ಅಧಿಕಾರಿಯು ಒಪ್ಪಬಹುದು ಅಥವಾ ಮರು ಹರಾಜು ಮಾಡಬಹುದು.
20. ಬಿಡ್ಡುದಾರರು ಬಿಡ್ಡನ್ನು ಒಪ್ಪಿದಲ್ಲಿ ಬಿಡ್ಡುದಾರರು E.M.D ಯ ಜೊತೆಗೆ ಪುನಃ ಹರಾಜಿನ ಮೊತ್ತದ ಶೇ. 2 ರ ಭಾಗವನ್ನು ಠೇವಣಿಯಾಗಿ ಇಡಬೇಕು.
21. ವಿಫಲರಾದ ಬಿಡ್‌ದಾರರ ಠೇವಣಿ ಹಣವನ್ನು ಹರಾಜು ಮುಗಿದ ತಕ್ಷಣ ಹಿಂತಿರುಗಿಸಲಾಗುವುದು.
22. ಒಂದು ವೇಳೆ ಬಿಡ್‌ದಾರರು ನಮೂದಿಸಿರುವ ಹಣವನ್ನು ಮೇಲಾಧಿಕಾರಿಗಳು ತಿರಸ್ಕರಿಸಿದಲ್ಲಿ ಅವರು ಕಟ್ಟಿರುವ ಹಣವನ್ನು ತಕ್ಷಣವೇ ಹಿಂತಿರಿಗಿಸಲಾಗುವುದು.
23. ಯಶಸ್ವಿ ಹರಾಜುದಾರರಿಗೆ ಅವರ ಟೆಂಡರು ಒಪ್ಪಿಗೆಯಾಗಿರುವ ಬಗ್ಗೆ ನೋಂದಾಯಿತ ಅಂಚೆಯ ಮೂಲಕ ಮಾಹಿತಿ ನೀಡಲಾಗುವುದು ಹಾಗೂ ಕಛೇರಿ ಸೂಚನಾ ಫಲಕದಲ್ಲೂ ಅವರ ಹೆಸರನ್ನು ನಮೂದಿಸಲಾಗುವುದು, ಈ ರೀತಿ ಮಾಡಿದ ನಂತರ ಟೆಂಡರ್‌ದಾರರಿಗೆ ಅದರ ಒಪ್ಪಿಗೆಯ ಬಗ್ಗೆ ಮಾಹಿತಿ ನೀಡಲಾಗಿದೆ ಎಂದು ಭಾವಿಸಲಾಗುವುದು.
24. ಬಿಡ್ಡುದಾರರು ಎಲ್ಲಾ ಸಮಯದಲ್ಲೂ ಕರ್ನಾಟಕ ಅರಣ್ಯ ಕಾಯ್ದೆ ಮತ್ತು ಇತರೆ ಶಾಸನಬದ್ದ ಮಾರ್ಪಟುಗಳಿಗೆ ಬದ್ದರಾಗಿರುತ್ತಾರೆ.
25. ಬಿಡ್ಡುದಾರರು ಟೆಂಡರ್ ಷರತ್ತಿನ ಯಾವುದೇ ಅಂಶಗಳನ್ನು ಉಲ್ಲಂಘನೆ ಮಾಡಿದಲ್ಲಿ ಅವರ ಮುಂಗಡ ಠೇವಣಿಯನ್ನು ಮುಟ್ಟುಗೋಲು ಹಾಕಿಕೊಳ್ಳಲಾಗುವುದು.

26. ಈ ಹರಾಜಿಗೆ ಸಂಬಂಧಿಸಿದಂತೆ ಬೇಕಾದ ಇತರೆ ಮಾಹಿತಿಗಳನ್ನು ಈ ಕಛೇರಿಯ ಕೆಲಸದ ವೇಳೆಯಲ್ಲಿ ತಿಳಿದುಕೊಳ್ಳಬಹುದು.

**ಕೆ.ಡಿ. ಉದುಪುಡಿ**
ಉಪ ಅರಣ್ಯ ಸಂರಕ್ಷಣಾಧಿಕಾರಿ,
ರಾಮನಗರ ವಿಭಾಗ, ರಾಮನಗರ.

**ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ರಾಮನಗರ ವಿಭಾಗ, ರಾಮನಗರ**

**ಷೆಡ್ಯೂಲ್**

| ಕ್ರಮ ಸಂಖ್ಯೆ | ಲಾಟು ಸಂಖ್ಯೆ | ವಿವರಗಳು (ನೀಲಗಿರಿ ಟಿಂಬರ್/ಲಾಗ್‌ಗಳು) | ಅಂದಾಜು ಪ್ರಮಾಣ ಘನಮೀಟರ್‌ನಲ್ಲಿ | ಮಾರಾಟದ ದಿನಾಂಕ | ಕಟ್ಟಬೇಕಾದ ಇಡಿಗಂಟು (EMD) ಪ್ರತಿ ಲಾಟ್‌ಗೆ |
|---|---|---|---|---|---|
| 1 | 1 | 6 ಲಾಗ್‌ಗಳು | 1.696 | 07–01–2008 | ರೂ. 5,000–00 |
| 2 | 2 | 6 ಲಾಗ್‌ಗಳು | 1.459 | 07–01–2008 | ರೂ. 5,000–00 |
| 3 | 3 | 10 ಲಾಗ್‌ಗಳು | 1.732 | 07–01–2008 | ರೂ. 5,000–00 |
| 4 | 4 | 11 ಲಾಗ್‌ಗಳು | 4.336 | 07–01–2008 | ರೂ. 5,000–00 |
| 5 | 5 | 8 ಲಾಗ್‌ಗಳು | 2.259 | 07–01–2008 | ರೂ. 5,000–00 |
| 6 | 6 | 15 ಲಾಗ್‌ಗಳು | 3.013 | 07–01–2008 | ರೂ. 5,000–00 |
| 7 | 7 | 8 ಲಾಗ್‌ಗಳು | 2.265 | 07–01–2008 | ರೂ. 5,000–00 |
| 8 | 8 | 5 ಲಾಗ್‌ಗಳು | 1.454 | 07–01–2008 | ರೂ. 5,000–00 |
| 9 | 9 | 9 ಲಾಗ್‌ಗಳು | 3.318 | 07–01–2008 | ರೂ. 5,000–00 |
| 10 | 10 | 7 ಲಾಗ್‌ಗಳು | 4.154 | 07–01–2008 | ರೂ. 5,000–00 |
| 11 | 11 | 9 ಲಾಗ್‌ಗಳು | 2.750 | 07–01–2008 | ರೂ. 5,000–00 |
| 12 | 12 | 3 ಲಾಗ್‌ಗಳು | 1.011 | 07–01–2008 | ರೂ. 5,000–00 |
| 13 | 13 | 9 ಲಾಗ್‌ಗಳು | 4.897 | 07–01–2008 | ರೂ. 5,000–00 |
| 14 | 14 | 11 ಲಾಗ್‌ಗಳು | 2.863 | 07–01–2008 | ರೂ. 5,000–00 |
| 15 | 15 | 13 ಲಾಗ್‌ಗಳು | 3.875 | 07–01–2008 | ರೂ. 5,000–00 |
| 16 | 16 | 9 ಲಾಗ್‌ಗಳು | 2.787 | 07–01–2008 | ರೂ. 5,000–00 |
| 17 | 17 | 4 ಲಾಗ್‌ಗಳು | 1.658 | 07–01–2008 | ರೂ. 5,000–00 |
| 18 | 18 | 7 ಲಾಗ್‌ಗಳು | 2.499 | 07–01–2008 | ರೂ. 5,000–00 |
| 19 | 19 | 7 ಲಾಗ್‌ಗಳು | 2.306 | 07–01–2008 | ರೂ. 5,000–00 |
| 20 | 20 | 5 ಲಾಗ್‌ಗಳು | 1.406 | 07–01–2008 | ರೂ. 5,000–00 |
| 21 | 21 | 5 ಲಾಗ್‌ಗಳು | 3.029 | 07–01–2008 | ರೂ. 5,000–00 |
| 22 | 22 | 5 ಲಾಗ್‌ಗಳು | 1.834 | 07–01–2008 | ರೂ. 5,000–00 |
| 23 | 23 | 6 ಲಾಗ್‌ಗಳು | 2.612 | 07–01–2008 | ರೂ. 5,000–00 |
| 24 | 24 | 3 ಲಾಗ್‌ಗಳು | 0.944 | 07–01–2008 | ರೂ. 5,000–00 |
| 25 | 25 | 4 ಲಾಗ್‌ಗಳು | 3.263 | 07–01–2008 | ರೂ. 5,000–00 |
| 26 | 26 | 3 ಲಾಗ್‌ಗಳು | 1.311 | 07–01–2008 | ರೂ. 5,000–00 |
| 27 | 27 | 5 ಲಾಗ್‌ಗಳು | 2.426 | 07–01–2008 | ರೂ. 5,000–00 |
| 28 | 28 | 6 ಲಾಗ್‌ಗಳು | 3.113 | 07–01–2008 | ರೂ. 5,000–00 |
| 29 | 29 | 7 ಲಾಗ್‌ಗಳು | 2.420 | 07–01–2008 | ರೂ. 5,000–00 |
| 30 | 30 | 4 ಲಾಗ್‌ಗಳು | 1.328 | 07–01–2008 | ರೂ. 5,000–00 |
| 31 | 31 | 4 ಲಾಗ್‌ಗಳು | 1.417 | 07–01–2008 | ರೂ. 5,000–00 |
| 32 | 32 | 10 ಲಾಗ್‌ಗಳು | 2.651 | 07–01–2008 | ರೂ. 5,000–00 |
| 33 | 33 | 5 ಲಾಗ್‌ಗಳು | 3.283 | 07–01–2008 | ರೂ. 5,000–00 |

| ಕ್ರಮ ಸಂಖ್ಯೆ | ಲಾಟು ಸಂಖ್ಯೆ | ವಿವರಗಳು (ನೀಲಗಿರಿ ಟಿಂಬರ್/ಲಾಗ್‌ಗಳು) | ಅಂದಾಜು ಪ್ರಮಾಣ ಘನಮೀಟರ್‌ನಲ್ಲಿ | ಮಾರಾಟದ ದಿನಾಂಕ | ಕಟ್ಟಬೇಕಾದ ಇಡಿಗಂಟು (EMD) ಪ್ರತಿ ಲಾಟ್‌ಗೆ |
|---|---|---|---|---|---|
| 34 | 34 | 6 ಲಾಗ್‌ಗಳು | 1.886 | 07–01–2008 | ರೂ. 5,000–00 |
| 35 | 35 | 8 ಲಾಗ್‌ಗಳು | 1.648 | 07–01–2008 | ರೂ. 5,000–00 |
| 36 | 36 | 7 ಲಾಗ್‌ಗಳು | 2.899 | 07–01–2008 | ರೂ. 5,000–00 |
| 37 | 37 | 9 ಲಾಗ್‌ಗಳು | 3.026 | 07–01–2008 | ರೂ. 5,000–00 |
| 38 | 38 | 10 ಲಾಗ್‌ಗಳು | 3.300 | 07–01–2008 | ರೂ. 5,000–00 |
| 39 | 39 | 15 ಲಾಗ್‌ಗಳು | 3.738 | 07–01–2008 | ರೂ. 5,000–00 |
| 40 | 40 | 5 ಲಾಗ್‌ಗಳು | 1.340 | 07–01–2008 | ರೂ. 5,000–00 |
| 41 | 41 | 7 ಲಾಗ್‌ಗಳು | 2.470 | 07–01–2008 | ರೂ. 5,000–00 |
| 42 | 42 | 7 ಲಾಗ್‌ಗಳು | 3.021 | 07–01–2008 | ರೂ. 5,000–00 |
| 43 | 43 | 9 ಲಾಗ್‌ಗಳು | 2.901 | 07–01–2008 | ರೂ. 5,000–00 |
| 44 | 44 | 8 ಲಾಗ್‌ಗಳು | 1.986 | 07–01–2008 | ರೂ. 5,000–00 |
| 45 | 45 | 10 ಲಾಗ್‌ಗಳು | 2.473 | 07–01–2008 | ರೂ. 5,000–00 |
| 46 | 46 | 9 ಲಾಗ್‌ಗಳು | 1.828 | 07–01–2008 | ರೂ. 5,000–00 |
| 47 | 47 | 12 ಲಾಗ್‌ಗಳು | 3.126 | 07–01–2008 | ರೂ. 5,000–00 |
| 48 | 48 | 9 ಲಾಗ್‌ಗಳು | 3.663 | 07–01–2008 | ರೂ. 5,000–00 |
| 49 | 49 | 8 ಲಾಗ್‌ಗಳು | 3.576 | 07–01–2008 | ರೂ. 5,000–00 |
| 50 | 50 | 9 ಲಾಗ್‌ಗಳು | 3.080 | 07–01–2008 | ರೂ. 5,000–00 |
| 51 | 51 | 10 ಲಾಗ್‌ಗಳು | 3.356 | 07–01–2008 | ರೂ. 5,000–00 |
| 52 | 52 | 10 ಲಾಗ್‌ಗಳು | 3.957 | 07–01–2008 | ರೂ. 5,000–00 |
| 53 | 53 | 6 ಲಾಗ್‌ಗಳು | 3.175 | 07–01–2008 | ರೂ. 5,000–00 |
| 54 | 54 | 7 ಲಾಗ್‌ಗಳು | 2.413 | 07–01–2008 | ರೂ. 5,000–00 |
| 55 | 55 | 10 ಲಾಗ್‌ಗಳು | 3.002 | 07–01–2008 | ರೂ. 5,000–00 |
| 56 | 56 | 7 ಲಾಗ್‌ಗಳು | 2.467 | 07–01–2008 | ರೂ. 5,000–00 |
| 57 | 57 | 4 ಲಾಗ್‌ಗಳು | 1.261 | 07–01–2008 | ರೂ. 5,000–00 |
| 58 | 58 | 6 ಲಾಗ್‌ಗಳು | 2.138 | 07–01–2008 | ರೂ. 5,000–00 |
| 59 | 59 | 4 ಲಾಗ್‌ಗಳು | 1.621 | 07–01–2008 | ರೂ. 5,000–00 |
| 60 | 60 | 9 ಲಾಗ್‌ಗಳು | 2.362 | 07–01–2008 | ರೂ. 5,000–00 |
| 61 | 61 | 8 ಲಾಗ್‌ಗಳು | 2.183 | 07–01–2008 | ರೂ. 5,000–00 |
| 62 | 62 | 5 ಲಾಗ್‌ಗಳು | 2.395 | 07–01–2008 | ರೂ. 5,000–00 |
| 63 | 63 | 10 ಲಾಗ್‌ಗಳು | 3.318 | 07–01–2008 | ರೂ. 5,000–00 |
| 64 | 64 | 8 ಲಾಗ್‌ಗಳು | 3.010 | 07–01–2008 | ರೂ. 5,000–00 |
| 65 | 65 | 7 ಲಾಗ್‌ಗಳು | 1.248 | 07–01–2008 | ರೂ. 5,000–00 |
| 66 | 66 | 12 ಲಾಗ್‌ಗಳು | 1.444 | 07–01–2008 | ರೂ. 5,000–00 |
| 67 | 67 | 6 ಲಾಗ್‌ಗಳು | 2.229 | 07–01–2008 | ರೂ. 5,000–00 |
| 68 | 68 | 2 ಲಾಗ್‌ಗಳು | 1.331 | 07–01–2008 | ರೂ. 5,000–00 |

**ಕೆ.ಡಿ. ಉದುಪುಡಿ**

ಪಿ.ಆರ್. 784

ಉಪ ಅರಣ್ಯ ಸಂರಕ್ಷಣಾಧಿಕಾರಿ,
ರಾಮನಗರ ವಿಭಾಗ, ರಾಮನಗರ.

**ಕಾರ್ಯಕಾರಿ ಅಭಿಯಂತರವರ ಕಛೇರಿ, ಲೋಕೋಪಯೋಗಿ ಬಂದರು ಹಾಗೂ ಒಳನಾಡು ಜಲಸಾರಿಗೆ ಇಲಾಖೆ, ಉಡುಪಿ ವಿಭಾಗ, ಉಡುಪಿ (ಲೋ.ಇ. ಉಡುಪಿ ವಿಭಾಗ, ಉಡುಪಿ)**

**ಟೆಂಡರು ಪ್ರಕಟಣೆ ನಂ./ಜಿ.ಎನ್.ಎಲ್./ಎನ್.ಐ.ಟಿ./ಯು.ಡಿ.ಎನ್./2007-2008/ಜೆ೩, ದಿನಾಂಕ: 26ನೇ ನವೆಂಬರ್ 2007**

ಈ ಕೆಳಗೆ ನಮೂದಿಸಿದ ಕಾಮಗಾರಿಗಳಿಗೆ ಕರ್ನಾಟಕ ಲೋಕೋಪಯೋಗಿ ಇಲಾಖೆಯಲ್ಲಿ ನೋಂದಾಯಿತ ಗುತ್ತಿಗೆದಾರರಿಂದ ನಿರ್ದಿಷ್ಟ ಫಾರಂನಲ್ಲಿ ಕರ್ನಾಟಕ ಟ್ರಾನ್ಸ್‌ಪೆರೆನ್ಸಿ ಇನ್ ಪಬ್ಲಿಕ್ ಪ್ರೊಕ್ಯೂರ್‌ಮೆಂಟ್ ಆ್ಯಕ್ಟ್ 2000ದ ಪ್ರಕಾರ ಐಟಂವಾರು ಟೆಂಡರುಗಳನ್ನು ಆಹ್ವಾನಿಸಲಾಗಿದೆ. ಪೂರ್ತಿಗೊಳಿಸಿದ ಟೆಂಡರ್ ಶೆಡ್ಯೂಲ್‌ನಲ್ಲಿ ಒಳಗೊಂಡ ವಿಶೇಷ ನಿಯಮಗಳ ಕೆಪಿಡಬ್ಲ್ಯೂಡಿ ಕೋಡ್ ವಾಲ್ಯೂಂ 2 ರ ಫಾರಂ. ನಂ ಪಿಡಬ್ಲ್ಯೂಜಿ 65 ಹಾಗೂ 66 ರಲ್ಲಿ ಹಾಗೂ ಕರ್ನಾಟಕ ಟ್ರಾನ್ಸ್‌ಪೆರನ್ಸಿ ಇನ್ ಪಬ್ಲಿಕ್ ಪ್ರೊಕ್ಯೂರ್‌ಮೆಂಟ್ ಆ್ಯಕ್ಟ್ 2000ರಲ್ಲಿ ನಿರೂಪಿತ ಶರ್ತಗೊಳಪಟ್ಟು ದಿನಾಂಕ 26.12.07 ರಂದು ಸಂಜೆ: 4.00 ಗಂಟೆಯವರೆಗೆ ಕಾರ್ಯಕಾರಿ ಅಭಿಯಂತರರು, ಲೋಕೋಪಯೋಗಿ, ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆ, ಉಡುಪಿ ವಿಭಾಗ, ಉಡುಪಿ ಇವರು ಸ್ವೀಕರಿಸುವರು.

ಖಾಲಿ ಟೆಂಡರು ಫಾರಂಗಳಿಗೆ ಅರ್ಜಿಗಳನ್ನು ನಿಗದಿಪಡಿಸಿದ ಬೆಲೆಯೊಂದಿಗೆ (ಇದನ್ನು ಹಿಂದಿರುಗಿಸಲಾಗುವುದಿಲ್ಲ) ದಿನಾಂಕ 24.12.2007 ರವರೆಗೆ ಕೆಲಸದ ಎಲ್ಲಾ ದಿನಗಳಂದು ಕಛೇರಿ ವೇಳೆಯಲ್ಲಿ ಸ್ವೀಕರಿಸಲಾಗುವುದು. ಅರ್ಜಿ ಜೊತೆಗೆ ಗುತ್ತಿಗೆದಾರರು ಅವರ ರಿಜಿಸ್ಟ್ರೇಶನನ ಸರ್ಟಿಫೈಡ್ ಪ್ರತಿಯನ್ನು ಸಲ್ಲಿಸತಕ್ಕದ್ದು. ಖಾಲಿ ಟೆಂಡರು ಫಾರಂಗಳನ್ನು ಈ ಕಛೇರಿಯಲ್ಲಿ ದಿನಾಂಕ: 24.12.2007 ರವರೆಗೆ ನೀಡಲಾಗುವುದು.

| ಕ್ರ. ಸಂ. | ಕಾಮಗಾರಿಯ ಹೆಸರು | ಟೆಂಡರಿಗಿರಿಸಿದ ಅಂದಾಜು ಮೊಬಲಗು (ರೂ. ಗಳಲ್ಲಿ) | ಇಎಂಡಿ (ರೂ.ಗಳಲ್ಲಿ) | ಕಾಮಗಾರಿ ಮುಗಿಸಲು ನಿಗದಿಪಡಿಸಿದ ಕಾಲಮಿತಿ (ಮಳೆಗಾಲ ಹೊರತು) | ಟೆಂಡರ್ ನಮೂನೆ | ಟೆಂಡರ್ ಶೆಡ್ಯೂಲ್ ಬೆಲೆ (ತೆರಿಗೆ ಸೇರಿ) | ಅರ್ಹ ಗುತ್ತಿಗೆದಾರರು |
|---|---|---|---|---|---|---|---|
| **ಲೆಕ್ಕ ಶೀರ್ಷಿಕೆ - 5054 ಸೇತುವೆ ಕೆ.ಆರ್.ಡಿ.ಸಿ.ಎಲ್.** | | | | | | | |
| 1. | ಉಡುಪಿ ಜಿಲ್ಲೆ, ಕುಂದಾಪುರ ತಾಲ್ಲೂಕು, ವಿರಾಜಪೇಟೆ - ಬೈಂದೂರು ರಸ್ತೆ ಕಿಮೀ 373.72 ರಲ್ಲಿ ಸೇತುವೆ ನಿರ್ಮಾಣ. | 19,72,000.00 | 29600.00 | 6 ತಿಂಗಳು | ದರವಾರು | 2250/- | IIನೇ ದರ್ಜೆ ಮತ್ತು ಮೇಲ್ಪಟ್ಟು |

**ಸಾಮಾನ್ಯನಿಯಮಗಳು:**

1) ಯಾವುದೇ ಟೆಂಡರನ್ನು ಅಥವಾ ಎಲ್ಲಾ ಟೆಂಡರುಗಳನ್ನು ಯಾವುದೇ ಕಾರಣ ನೀಡದೇ ತಿರಸ್ಕರಿಸುವ ಅಥವಾ ಅಂಗೀಕರಿಸುವ ಹಕ್ಕನ್ನು ಸಂಬಂಧಪಟ್ಟ ಇಲಾಖಾ ಅಧಿಕಾರಿಯವರು ಹೊಂದಿರುತ್ತಾರೆ.
2) ಇಎಂಡಿಯನ್ನು ರಾಷ್ಟ್ರೀಕೃತ ಯಾ ಶೆಡ್ಯೂಲ್ ಬ್ಯಾಂಕಿನಿಂದ ಪಡೆದ ಎಫ್.ಡಿ.ಆರ್./ ಕಾಲ್‌ಡೆಪೋಸಿಟ್,ಡಿಡಿ, ಬ್ಯಾಂಕ್ ಗ್ಯಾರಂಟಿ ಅಥವಾ ಎನ್.ಎಸ್.ಸಿ. ರೂಪದಲ್ಲಿ (ಎನ್.ಎಸ್.ಸಿ.ಯನ್ನು ಕೆಳಸಹಿದಾರರ ಹೆಸರಿಗೆ ಪ್ಲೆಜ್ಡ್ ಮಾಡಿ) ಸಲ್ಲಿಸಬೇಕು. ನಿಗಧಿಪಡಿಸಿದ ಮುಂಗಡ ಠೇವಣಿಯೊಂದಿಗೆ ಸಲ್ಲಿಸದ ಟೆಂಡರನ್ನು ಪರಿಶೀಲನೆಗೆ ಪರಿಗಣಿಸಲಾಗುವುದಿಲ್ಲ.
3) ಟೆಂಡರಿನಲ್ಲಿ ಭಾಗವಹಿಸಲಿಚ್ಚಿಸುವ ಗುತ್ತಿಗೆದಾರರು ಉದ್ದೇಶಿಸಿರುವ ಕಾಮಗಾರಿಯ ಶೇ. 30 ರಷ್ಟು ಮೊತ್ತದ ಇದೇ ತರಹದ ಕಾಮಗಾರಿಯನ್ನು ಕಳೆದ ಐದು ವರ್ಷಗಳ ಅವಧಿಯ ಒಂದು ಆರ್ಥಿಕ ವರ್ಷದಲ್ಲಿ ಪೂರೈಸಿರತಕ್ಕದ್ದು. ಈ ಕುರಿತ ಪ್ರಮಾಣಪತ್ರವನ್ನು ಸಕ್ಷಮ ಅಧಿಕಾರಿಯವರಿಂದ ಪಡೆದು ಅರ್ಜಿಯೊಂದಿಗೆ ಸಲ್ಲಿಸತಕ್ಕದ್ದು.
4) ಗುತ್ತಿಗೆದಾರರು ಸಿಮೆಂಟ್, ಉಕ್ಕು ಹಾಗೂ ಕಾಮಗಾರಿಗಳಿಗೆ ಬೇಕಾದ ಎಲ್ಲಾ ಸಾಮಾಗ್ರಿಗಳ ಸಂಗ್ರಹಕ್ಕೆ ಮತ್ತು ಯಂತ್ರೋಪಕರಣ ಹಾಗೂ ಸಾಧನ ಸಲಕರಣೆಗಳಿಗೆ ತಮ್ಮ ಸ್ವಂತ ವ್ಯವಸ್ಥೆ ಮಾಡಿಕೊಳ್ಳಬೇಕು. ಇದನ್ನು ಕೆಲಸಕ್ಕೆ ಉಪಯೋಗಿಸುವ ಮೊದಲು ಗುಣನಿಯಂತ್ರಣ ಪರೀಕ್ಷೆಗೆ ಒಳಪಡಿಸಿ, ಫಲಿತಾಂಶವು ಐ.ಎಸ್.ಎಸ್. (I.S.S.) ಗುಣಮಟ್ಟಕ್ಕೆ ಸರಿಹೊಂದುವಂತಿರಬೇಕು. ಇದನ್ನು ಕೆಲಸದ ಎಲ್ಲಾ ಹಂತಗಳಲ್ಲಿ ಒದಗಿಸಬೇಕು.
5) ಸೇತುವೆ ಕಾಮಗಾರಿ ಪೂರ್ತಿಗೊಳಿಸಿದ ಬಳಿಕ ಎರಡು ವರ್ಷ ಕಾಲ ಯಾವುದೇ ದುರಸ್ತಿ ಕಾರ್ಯಬರಬಾರದು. ಈ ಮೇಲಿನಂತೆ ಡಿಫೆಕ್ಟ್ ಲಯಾಬಿಲಿಟಿ ಅವಧಿಯಲ್ಲಿ ಯಾವುದಾದರೂ ದುರಸ್ತಿ ಬೇಕಾದರೆ ಗುತ್ತಿಗೆದಾರರು / ವಾಣಿಜ್ಯ ಸಂಸ್ಥೆ ಅದನ್ನು ತಮ್ಮ ಸ್ವಂತ ಖರ್ಚಿನಲ್ಲಿ ಪುನರ್ ನಿರ್ಮಿಸಿಕೊಡಬೇಕು.
6) ಕಾಮಗಾರಿಗಳನ್ನು ಕೈಗೆತ್ತಿಕೊಳ್ಳುವ ಗುತ್ತಿಗೆದಾರರಿಂದ ಶೇ. 1 ರಷ್ಟು (ಶೇಕಡಾ ಒಂದರಷ್ಟು) 'ಕಾರ್ಮಿಕ ಕಲ್ಯಾಣ ಸುಂಕ' ಕಡಿತಗೊಳಿಸಲಾಗುವುದು. ಅಲ್ಲದೆ ಸದ್ರಿ ಕಾಯ್ದೆ / ಆದೇಶಗಳಿಗೆ ಅನುಗುಣವಾಗಿ ಸುಂಕವನ್ನು ಗಣನೆಗೆ ತೆಗೆದುಕೊಂಡು ಟೆಂಡರ್ ದರ ನಮೂದಿಸತಕ್ಕದ್ದು.

ಹೆಚ್ಚಿನ ವಿವರಗಳಿಗೆ ಕಛೇರಿಯ ವೇಳೆಯಲ್ಲಿ ಈ ಕಛೇರಿಯನ್ನು ಸಂಪರ್ಕಿಸಬಹುದಾಗಿದೆ.

ಕಾರ್ಯನಿರ್ವಾಹಕ ಇಂಜಿನಿಯರ್,
ಲೋಕೋಪಯೋಗಿ ಬಂದರು ಹಾಗೂ ಒಳನಾಡು ಜಲಸಾರಿಗೆ ಇಲಾಖೆ,
ಉಡುಪಿ ವಿಭಾಗ, ಉಡುಪಿ.

ಪಿ.ಆರ್. 776

## ತೋಟಗಾರಿಕೆ ಇಲಾಖೆ

**ವಿಶೇಷಾಧಿಕಾರಿಗಳ ಕಛೇರಿ ತೋಟಗಾರಿಕೆ ಇಲಾಖೆ, ನಂದಿಗಿರಿಧಾಮ, ಚಿಕ್ಕಬಳ್ಳಾಪುರ ತಾಲ್ಲೂಕು**

**ಟೆಂಡರ್ ಆಹ್ವಾನ ಪ್ರಕಟಣೆ ಸಂ.: ತೋಇ/ವಿಅ.ನಂದಿಗಿರಿ/ವಿನಿ1/46/07-08, ದಿನಾಂಕ: 10ನೇ ಡಿಸೆಂಬರ್ 2007**

ಚಿಕ್ಕಬಳ್ಳಾಪುರ ಜಿಲ್ಲೆ, ನಂದಿಗಿರಿಧಾಮದಲ್ಲಿ ತೋಟಗಾರಿಕೆ ಇಲಾಖಾ ಅಧೀನದಲ್ಲಿರುವ ಎರಡು ಚಿಲ್ಲರೆ ಅಂಗಡಿಗಳನ್ನು ದಿನಾಂಕ:1.2.2008 ರಿಂದ 31.01.2009 ರವರೆಗೆ ಸಾರ್ವಜನಿಕರ ಮೂಲಕ ನಡೆಸಲು ಟೆಂಡರ್–ಯಾ–ಬಹಿರಂಗ ಹರಾಜು ಏರ್ಪಡಿಸಲಾಗಿದೆ. ಟೆಂಡರ್ ಫಾರಂಗಳನ್ನು ಪಡೆಯಲು ಕೊನೆಯ ದಿನಾಂಕ: 8.1.2008 ಟೆಂಡರ್ ಫಾರಂನ್ನು ದಿನಾಂಕ: 9.1.2008 ರಂದು ಸಂಜೆ 5–00 ಗಂಟೆಯೊಳಗೆ ಸಲ್ಲಿಸಬೇಕು ದಿನಾಂಕ:10.1.2008 ರ ಮಧ್ಯಾಹ್ನ 3–30 ಗಂಟೆಗೆ ತೋಟಗಾರಿಕೆ ನಿರ್ದೇಶನಾಲಯದ ಎಫ್.ಐ.ಯು.ಸಭಾಂಗಣ ಲಾಲ್‌ಬಾಗ್, ಬೆಂಗಳೂರು–4 ಇಲ್ಲಿ ಬಹಿರಂಗ ಹರಾಜು ಏರ್ಪಡಿಸಲಾಗಿದೆ. ಹೆಚ್ಚಿನ ವಿವರಗಳಿಗಾಗಿ ಈ ಕಛೇರಿಯಲ್ಲಿ ಸಂಪರ್ಕಿಸಲು ಕೋರಿದೆ.

ವಿಶೇಷ ಅಧಿಕಾರಿ
ತೋಟಗಾರಿಕೆ ಇಲಾಖೆ, ನಂದಿಗಿರಿಧಾಮ.

ಪಿ.ಆರ್. 791